## ಕರ್ನಾಟಕ ವಾರ್ತೆ

'ಗಾಂಧೀಯವರು ಅವಿರ್ಭಾವ, ಅಂದೊಂದು ಅಪೂರ್ವ ಸನ್ನಿವೇಶ. ಅವರು ಹೊಸ ವಾತಾವರಣದ ವಿದ್ಯುತ್ ಸ್ಪರ್ಶ ಮಾಡಿದ ವಿಶಿಷ್ಟ ಶಕ್ತಿ. ಆ ಸ್ಪರ್ಶದಿಂದ ನಮ್ಮ ಕಾರ್ಯ ಕ್ಷೇತ್ರದ ಹರಹು ಮತ್ತಷ್ಟು ವಿಸ್ತಾರವಾಯಿತು, ಆ ದಿವ್ಯ ಚೇತನ ಉಜ್ವಲ ಪ್ರಕಾಶದಿಂದ ನಮ್ಮ ಕಣ್ಣುಗಳನ್ನು ಕವಿದಿದ್ದ ಕತ್ತಲೆಯ ತೆರೆ ಸರಿಯಿತು. ಗಾಂಧೀಜಿ ಅಂತರಿಕ್ಷದಿಂದ ಇಳಿದು ಬಂದವರಲ್ಲ. ಭಾರತದ ಕೋಟಿ ಕೋಟಿ ಜನರ ನಡುವೆ ಉದಿಸಿಬಂದವರು.

– ಜವಾಹರಲಾಲ್ ನೆಹರು

ಜವಹರಲಾಲ್ ನೆಹರು, ಸರ್ದಾರ್ ಪಟೇಲ್, ಸುಭಾಷ್‌ಚಂದ್ರ ಭೋಸ್, ಸರೋಜಿನಿ ನಾಯ್ದು, ಜಯಪ್ರಕಾಶನಾರಾಯಣ್, ಮೊದಲಾದ ಮಹಾನ್ ಸ್ವಾತಂತ್ರ್ಯ ಯೋಧರೊಂದಿಗೆ ಭಾರತದ ವೈಭವಪೂರ್ಣ ಸ್ವಾತಂತ್ರ್ಯ ಧ್ಯೇಯಕ್ಕಾಗಿ ರಾಷ್ಟ್ರದ ಸಹಸ್ರ, ಸಹಸ್ರ, ಸಂಖ್ಯೆಯ ಜನತೆಗೆ ಸ್ಫೂರ್ತಿ ನೀಡಿದ ಹುರಿದುಂಬಿಸಿದ ಅದ್ಭುತ ದಾರ್ಶನಿಕ ಚೇತನ– ಮಹಾತ್ಮಾಗಾಂಧಿಜಿ,

ತಮ್ಮ ಅಪೂರ್ವ ತ್ಯಾಗ ಮತ್ತು ಬಲಿದಾನದಿಂದ ರಾಷ್ಟ್ರಕ್ಕೆ ಸ್ವಾತಂತ್ರ್ಯವನ್ನು ತಂದು–ಕೊಟ್ಟ ಮಹಾತ್ಮಾರಿಗೆ ಸ್ವಾತಂತ್ರ್ಯ ದಿನದಂದು ಶ್ರದ್ಧಾಂಜಲಿಯನ್ನರ್ಪಿಸುವುದು ನಮ್ಮ ಕರ್ತವ್ಯ. ಇದು ಒಂದು ಸಂಭ್ರಮದ ದಿನ ನಿಜ. ಆದರೆ ಅದರೊಂದಿಗೇ ಸ್ವಾತಂತ್ರ್ಯ ಪದದ ಪೂರ್ಣವಾದ ಅರ್ಥವನ್ನು ಅರಿತುಕೊಳ್ಳುವ ದಿನವೂ ಹೌದು, ಎಂಬುದನ್ನು ನಾವು ಮರೆಯಬಾರದು,

ಕಳೆದ ಐದು ವರ್ಷಗಳಲ್ಲಿ ಕರ್ನಾಟಕ ರಾಜ್ಯ ವಿವಿಧ ಅಭಿವೃದ್ಧಿ ಕ್ಷೇತ್ರಗಳಲ್ಲಿ ಹೆಮ್ಮೆಪಟ್ಟು ಕೊಳ್ಳುವಂತಹ ಸಾಧನೆ ಮಾಡಿದೆ. ಒಟ್ಟು ಜನತೆಯ ಕ್ಷೇಮಾಭ್ಯುದಯಕ್ಕಾಗಿ ಹಲವಾರು ಪ್ರಗತಿಪರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿರುವ ಕರ್ನಾಟಕ, ಮುನ್ನಡೆಯ ಹಾದಿಯಲ್ಲಿ ಮುಂಚೂಣಿಯಲ್ಲಿರುವ ರಾಜ್ಯ.

**ಕುಟುಂಬ ಯೋಜನೆ :–** ಕುಟುಂಬ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನದಲ್ಲಿ 1986–87 ರಲ್ಲಿ ಶೇ. 91.3 ರಷ್ಟು ಪ್ರಗತಿ ಸಾಧಿಸಿರುವ ಕರ್ನಾಟಕ ಚಿಕ್ಕ ಕುಟುಂಬದ ಆದರ್ಶಕ್ಕೆ ಮಾದರಿಯಾಗಿದೆ.

(3ನೇ ರಕ್ಷಾಪುಟ ನೋಡಿ)

# ಸಿದ್ಧಗಂಗಾ

ಸಂಪುಟ-೨೪ ಸಂಚಿಕೆ-೮ ಆಗಸ್ಟ್, ೧೯೮೮

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧ

ಕಾಗೆಯು ಸಹಬಾಳ್ವೆ ಕೋಗಿಲೆಯು ಶ್ರೀಕಂಠ
ಸೋಗನವಿಲಿನ ಲಾಸ್ಯ ಒದಗುವುದು । ನೀನೊಲಿಯೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಯಂತ್ರಕಸಾಧ್ಯವು ತಂತ್ರಕಸಾಧ್ಯವು
ಮಂತ್ರಕಸಾಧ್ಯವು ಸಿದ್ಧಪುದು । ನೀನೊಲಿಯೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ದುಡ್ಡು ದುಗ್ಗಾಣಿಯು ಮನೆಮಠತೋಟವು
ಪಟ್ಟಪದವಿಗಳೆಲ್ಲ ಧಾವಿಪವು । ನೀನೊಲಿಯೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

# ಈ ಸಂಚಿಕೆಯಲ್ಲಿ





# ಶ್ರೀವಾಣಿ

ಸ್ವಾತಂತ್ರ್ಯ ಮನುಷ್ಯನ ಮೂಲಭೂತ ಹಕ್ಕು. ನಮಗೆ ಸ್ವಾತಂತ್ರ್ಯ ಬಂದು ನಾಲ್ಕುದಶಕಗಳು ಉರುಳಿದವು. ಮಹಾತ್ಮಾಜೀಯವರ. ಮುಖಂಡತ್ವದಲ್ಲಿ ಬಂದ ನಮ್ಮ ಸ್ವಾತಂತ್ರ್ಯ ಜಗತ್ತಿನ ಸ್ವಾತಂತ್ರ್ಯ ಇತಿಹಾಸದಲ್ಲಿ ಆದರ್ಶಪೂರ್ಣವಾದುದು. ಅಹಿಂಸಾತ್ಮಕವಾದ ಆಂದೋಳನ. ಕೆಲವು ಮಂದಿ ಪ್ರಾಣ ತ್ಯಾಗ ಮಾಡಿದವರಾದರೂ ಅಹಿಂಸಾ ಮೂಲವಲ್ಲ, ಅದು ಆತ್ಮಾರ್ಪಣೆ. ಬಲಿದಾನ. ದೇಶಕ್ಕಾಗಿ ಪ್ರಾಣ ತ್ಯಾಗ ಮಾಡಿದ ಇತಿಹಾಸ ನಮಗೆ ಹೊಸದೇನಲ್ಲ. ದೇಶ ಪ್ರೇಮದ ಮುಂದೆ ಇವೆಲ್ಲವೂ ಕ್ಷಣಿಕ. "ಜನನೀ ಜನ್ಮ ಭೂಮಿಶ್ವ ಸ್ವರ್ಗಾದಪಿ ಗರೀಯಸಿ" ಎಂಬ ಉದಾತ್ತ ಧ್ಯೇಯ ಸಾಧನೆ. ನಮ್ಮ ಪೂರ್ವಜನರ ಜೀವನ ಮೌಲ್ಯ. ಆತ್ಮಶ್ರೀಯ ಅಮರತ್ವಕ್ಕೆ ಮಾರ್ಗದರ್ಶಕ. ದೇಶಪ್ರೇಮವಿಲ್ಲದ ಜೀವನ ವ್ಯರ್ಥ. ದೇಶಪ್ರೇಮದ ಜೊತೆಗೆ ಜೀವನ ರಸಪೂರ್ಣವಾಗಬೇಕು, ಸುಂದರ ಬಂಧುರವಾಗಬೇಕು, ತೇಜೋವಂತವಾಗಿರಬೇಕು. ವೀರ್ಯವತ್ತರವಾಗಿರಬೇಕು. ಶಾಂತಿ ಸಮೃದ್ಧಿಯಿಂದ ಕೂಡಿರಬೇಕು. ಆಗಲೇ ಸ್ವಾತಂತ್ರ್ಯಕ್ಕೊಂದು ಅರ್ಥ. ಮಹಾತ್ಮಾಜಿಯವರ ಆಶಯ "ಭಾರತೀಯ ಪ್ರತಿಯೊಬ್ಬ ಪ್ರಜೆಗೂ ಕನಿಷ್ಠ ಪಕ್ಷ ಪ್ರತಿನಿತ್ಯ ಎರಡುಹೊತ್ತಿನ ಊಟ ಸಿಗುವಂತಾಗಬೇಕು. ಆಗಲೇ ಸ್ವಾತಂತ್ರ್ಯಕ್ಕೊಂದು ಅರ್ಥ, 1947ರಲ್ಲಿ ನಮಗೆ ಬಂದ ಸ್ವಾತಂತ್ರ್ಯ ಕೇವಲ ರಾಜಕೀಯ ಸ್ವಾತಂತ್ರ್ಯ ಜೀವನ ನೆಮ್ಮದಿಯನ್ನು ಕಾಣಬೇಕಾದರೆ, ಆರ್ಥಿಕ ಸ್ವಾತಂತ್ರ್ಯ ಬೇಕು. ಸಾಮಾಜಿಕ ಸ್ವಾತಂತ್ರ್ಯ ಬೇಕು. ಸುಮಾರು 800 ವರ್ಷಗಳ ಹಿಂದೆ ಭಗವಾನ್ ಬಸವಣ್ಣನವರು ಸಮಗ್ರ ಕ್ರಾಂತಿಯ ಕಹಳೆ ಸಾರಿದರು. ಸ್ವಾತಂತ್ರ್ಯವೇ ಅಂದಿನ ಕ್ರಾಂತಿಯ ಮೂಲಮಂತ್ರ. ಅದರ ಫಲವಾಗಿ ರಾಜಕೀಯ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಸಾಮಾಜಿಕ ಸ್ವಾತಂತ್ರ್ಯ ಆರ್ಥಿಕ ಸ್ವಾತಂತ್ರ್ಯ, ಸ್ತ್ರೀ ಸ್ವಾತಂತ್ರ್ಯ ಮುಂತಾದ ಹಲವು ರೀತಿಯ ಸ್ವಾತಂತ್ರ್ಯ ಆಂದೋಲನವನ್ನೇ ಸಾರಿ ಸಮಾಜಕ್ಕೆ ಇಡೀ ದೇಶಕ್ಕೆ ಮಹತ್ತರ ಚಾಲನೆಯನ್ನು ತಂದು ಕೊಟ್ಟರು. ವರ್ಣ ವರ್ಗರಹಿತ ಸಮಾಜ ನಿರ್ಮಾಣ ಆರ್ಥಿಕ ಸ್ವಾವಲಂಬನೆಗೆ ದುಡಿಮೆ ತಾರಕಮಂತ್ರವೆಂಬ ಸ್ವತಂತ್ರ್ಯ ವಿಚಾರ ಮಂಥನಕ್ಕೆ ಮಾರ್ಗದರ್ಶನ ಮಾಡಿದರು. ಅವರ ಆದರ್ಶ ಇಂದಿನ ನೂರಾರು ಸಮಸ್ಯೆಗಳಿಗೆ ಪರಿಹಾರೋಪಾಯವಾಗಿದೆ, ಬಸವಣ್ಣನವರ ಆದರ್ಶ ಪಾಲನೆ ಮಾಡುವಲ್ಲಿ ವ್ಯಷ್ಟಿ ಮತ್ತು ಸಮಷ್ಟಿಗಳ ಅಭ್ಯುದಯವಿದೆ ಆದರೆ ಇಂದು ಅನ್ಯಾಯ. ಅನೀತಿ ಅಕ್ರಮ. ಅನಾಚಾರ, ಅತಿಯಾಗಿವೆ. ಅವುಗಳ ನಿವಾರಣೆ ಯಾಗಬೇಕಾಗಿದೆ. ನಾಯಕರಿಂದ ಹಿಡಿದು ಸಾಮಾನ್ಯ ಪ್ರಜೆಯವರೆವಿಗೂ ಐಷಾರಾಮ ಜೀವನಕ್ಕೆ ಬಲಿಯಾಗಿ ಸತ್ಯ ಮತ್ತು ಪ್ರಾಮಾಣಿಕತೆಗಳು ಮೂಲೆ ಗುಂಪಾಗಿವೆ. ರಾಷ್ಟ್ರದಾದ್ಯಂತ ಅನ್ಯಾಯದ ತಾಂಡವ ನರ್ತನಕ್ಕೆ ನೂರಾರು, ಸಾವಿರಾರು , ನಿರಪರಾಧಿಗಳ ಬಲಿಯಾಗುತ್ತಿದೆ. ದಿನ ಬೆಳಗಾದರೆ ಪತ್ರಿಕೆಗಳ ಮುಖಪುಟದಲ್ಲಿ ಸಾವು ನೋವಿನ ಕೊಲೆ ಸುಲಿಗೆಯ ದಪ್ಪಕ್ಷರ ಸುದ್ದಿ. ಇದು ಮಹಾತ್ಮರು ಬಯಸಿದ ಸ್ವಾತಂತ್ರ್ಯವೇ ? ಇದು ಸ್ವಾತಂತ್ರ್ಯವೋ? ಅಥವಾ ಸ್ವಚ್ಛಂದ ಪ್ರವೃತ್ತಿಯೋ ? ವಿಚಾರ ಶೀಲರು ಚಿಂತಿಸಬೇಕಾಗಿದೆ. ಕಾರ್ಯಪ್ರವೃತ್ತವಾಗಬೇಕಾಗಿದೆ. ನೆಮ್ಮದಿಯ ಬದುಕು ಜನತೆಗೆ ಸಿಗುವಂತಾಗಬೇಕಾಗಿದೆ. ಮಂಗಳಮಯ ವಾತಾವರಣ ಸೃಷ್ಟಿಯಾಗಲು ಪ್ರತಿಯೊಬ್ಬ ಜನತೆಯೂ ಹೊಣೆಗಾರರಾಗಬೇಕಾಗಿದೆ.

**ಸಿದ್ಧಗಂಗಾ ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
ಪ್ರೊ|| ಚನ್ನಪ್ಪ ಎರೇಸೀಮೆ
* * *
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ
* * *
ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ
* * *
ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ
* * *
ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ
* * *
ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
* * *
ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ
* * *
ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 20 - 00 ರೂ
ಅಜೀವ ಸದಸ್ಯತ್ವ 201 - 00 ರೂ

ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ. ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ. ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ. ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

" ಸಂಪಾದಕರು "
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಪರಿಣಾಮ

"ಒಬ್ಬ ಗೃಹಸ್ಥ ತಪ್ಪುಮಾಡಿದಕ್ಕೆ ಅದರ ಫಲವನ್ನು ಆತನ ಕುಟುಂಬ ಅನುಭವಿಸಬೇಕಾಗುತ್ತದೆ, ಆದರೆ ಒಬ್ಬ ಸ್ವಾಮಿ ತಪ್ಪು ಮಾಡಿದರೆ ಅದರ ಫಲವನ್ನು ಸಮಾಜ ಊಟ ಮಾಡಬೇಕಾಗುತ್ತದೆ"

ಪರಮ ಪೂಜ್ಯ ಶ್ರೀ ಶ್ರೀ ಗಳವರು ಗ್ರಾಮೀಣ ಸಮಾರಂಭ ಒಂದರಲ್ಲಿ ಹೀಗೆ ನುಡಿದರು.. ಅರ್ಥಪೂರ್ಣವಾದ ನುಡಿಮುತ್ತು. ಬಸವಣ್ಣನವರು ಹೇಳಿದ್ದ ಇಂತಹ ಮಾತುಗಳನ್ನು ಕುರಿತಿರಬೇಕು "ನುಡಿದರೆ ಮುತ್ತಿನ ಹಾರದಂತಿರಬೇಕು" ಎಂಬುವಚನ ಸ್ವಾನುಭವಕ್ಕೆ ಬರದ ಯಾವುದನ್ನೂ ಶರಣರು ಹೇಳಲಿಲ್ಲ. ಅನುಭವ ವೇದ್ಯವಾಗದ ಯಾವುದೂ ಅವರಿಗೆ ಮಾನ್ಯವಾಗಲಿಲ್ಲ. ಪುಸ್ತಕ "ಓದಿಗಿಂತ, ಮಸ್ತಕದ ಬುದ್ಧಿಗಿಂತ ಹೃದಯದ ಬೆಳಕು ಅವರಿಗೆ ಮುಖ್ಯವಾಯಿತು. ಗೃಹಸ್ಥನಾಗಲಿ, ಸ್ವಾಮಿ ಅಥವಾ ಮಠಾಧಿಕಾರಿಯಾಗಲಿ ಜಾಗೃತನಾಗಿ ನಡೆಯದೇ ಹೋದರೆ ಅನರ್ಥವಾಗುವುದರಲ್ಲಿ ಸಂದೇಹವೆಲ್ಲಿಯದು ? ಅಲ್ಲದೆ ಗೃಹಸ್ಥ ಮಾಡುವ ತಪ್ಪಿನಿಂದಾಗುವ ಪರಿಣಾಮದ ಪ್ರಮಾಣ ಅಲ್ಪ ಮೇಲಾಗಿ ಸೀಮಿತವಾದರೆ' ಸ್ವಾಮಿಯಾದವನು ಮಾಡುವ ತಪ್ಪಿನ ಪರಿಣಾಮದ ಪ್ರಮಾಣ ದೊಡ್ಡದು ಹಾಗು ವ್ಯಾಪಕವಾದುದು. ಸ್ವಾಮಿಯಾದವನು ಮೈಯೆಲ್ಲ ಕಣ್ಣಾಗಿ ಬಾಳುವುದರ ಜೊತೆಗೆ ತನ್ನನಡೆ ನುಡಿಯಿಂದ, ಚಲನ ವಲನಗಳಿಂದ, ಆಚಾರ ವಿಚಾರಗಳಿಂದ, ಸಂಚಾರ ಸಂಪರ್ಕಗಳಿಂದ, ಸಹವಾಸ–ಪರಿಸರಗಳಿಂದ, ಚಿಂತನ ಮಂಥನಗಳಿಂದ, ಊಟ-ಉಪಚಾರಗಳಿಂದ, ಆಲೋಚನೆ ಆಕಾಂಕ್ಷೆಗಳಿಂದ ತಾನು ಪ್ರತಿನಿಧಿಸುವ ಸಂಸ್ಥೆಯ ಮೇಲೆ ಸಮಾಜದ ಮೇಲೆ ಯಾವ ತೆರನಾದ ಪರಿಣಾಮಗಳುಂಟಾಗಬಹುದು ಎಂಬುದನ್ನು ದರ್ಶಿಸುವ ಶಕ್ತಿಯುಳ್ಳವನಾಗಿರಬೇಕಾಗುತ್ತದೆ–ತನ್ನ ಕಣ್ ನೋಟ, ತನ್ನ ಬಾಯ್ಮಾತು, ತಾನಿಡುವ ಒಂದು ಹೆಜ್ಜೆ ಭವಿಷ್ಯದಲ್ಲಿ ಎಂಥ ಪರಿಣಾಮವನ್ನುಂಟು ಮಾಡಬಹುದು ಎಂಬುದರ ಪೂರ್ವ-ಪ್ರಜ್ಞೆಯುಳ್ಳವನಾಗಿರ ಬೇಕಾಗುತ್ತದೆ. ಇಲ್ಲದೆ ಹೋದರೆ ಫಲವನ್ನು ಅನುಭವಿಸುವ ಕುಟುಂಬದ–ಸದಸ್ಯರು, ಸಮಾಜದವರು ಸಂಕಟವನ್ನನುಭವಿಸ ಬೇಕಾಗುತ್ತದೆ. ತ್ರಿಕಾಲಬಾಧಿತವಾದ ಸತ್ಯದ ಇಂಥ ಮಾತುಗಳು 'ಮುತ್ತಿನಹಾರ' ಕ್ಕಿಂತಲೂ ಹೆಚ್ಚು ಬೆಲೆಯುಳ್ಳವಾಗಲಾರವೆ ? ಗೃಹಸ್ಥ ಕೌಟುಂಬಿಕ ಉನ್ನತಿ–ಅವನತಿಗಳಿಗೆ ಪಾಪ–ಪುಣ್ಯಗಳಿಗೆ, ಧರ್ಮ ಕರ್ಮಗಳಿಗೆ, ಸುಖ ದುಃಖಗಳಿಗೆ, ನೆಲೆ–ಬೆಲೆಗಳಿಗೆ, ಗೌರವ-

ಅಗೌರವಗಳಿಗೆ ಕಾರಣನಾಗುವಂತೆ ಸ್ವಾಮಿಯೂ ಸಹ ಒಂದು ಸಂಸ್ಥೆಯ ಏಳು-ಬೀಳುಗಳಿಗೆ, ಎತ್ತರ-ಬಿತ್ತರಗಳಿಗೆ ಕಾರಣನಾಗುತ್ತಾನೆಯಲ್ಲವೆ? ಲಗ್ನವಾದವರೆಲ್ಲರೂ ಹೇಗೆ ಗೃಹಸ್ಥರಾಗಲಾರರೋ' ಕಾವಿ ತೊಟ್ಟವರೆಲ್ಲರೂ ಸ್ವಾಮಿಗಳಾಗಲಾರರುತ್ತಾನೆ ? "ಮಂಡೆ ಬೋಳಾದೊಡೇನು ಮನ ಬೋಳಾಗದನಕ್ಕ" ಎಂದಲ್ಲವೆ. ಶರಣರವಾಣಿ ಮನಬೋಳಾಗುವುದೆಂದರೇನು ? ಆಶೆಯ ಬೇರನ್ನು ಕಿತ್ತೊಗೆಯ ಬೇಕೆಂದಲ್ಲವೆ ? ಬದಲಾಗಿ ವೇಷದ ಮರೆಯಲ್ಲಿ ವಿಷಯ ಸುಖಕ್ಕೆಳಸುವುದು ಮೋಸವಾಗಲಾರದೆ ? ಅಂಥ ಮೋಸದಿಂದ ವ್ಯಕ್ತಿನಾಶದೊಂದಿಗೆ ವ್ಯಕ್ತಿಯ ಸುತ್ತ ಸುತ್ತುವರಿದಿರುವ ಸಮಾಜವೂ ಪ್ರಪಾತದಂಚಿನಕಡೆಗೆ ಧಾವಿಸುವಂತಾಗುವುದಿಲ್ಲವೆ ? ಸಮಾಜಕ್ಕೆ ಮಾರ್ಗದರ್ಶನ ಮಾಡುವ ನೈತಿಕ ಶಕ್ತಿಯೂದರೂ ಹಾಗಾದಾಗ ಉಳಿಯುವುದೆಂತು?

ತಪ್ಪು ಮಾಡಿದ ಗೃಹಸ್ಥನನ್ನು ಶಿಕ್ಷಿಸುವ ಜವಾಬ್ದಾರಿ ಕುಟುಂಬದ ಸದಸ್ಯರಿಗಿರುವ ನೈತಿಕ ಹಕ್ಕು ಅಂತೆಯೇ ತಪ್ಪುಮಾಡಿದ ಸ್ವಾಮಿಯನ್ನು ಶಿಕ್ಷಿಸುವ ಹಕ್ಕು ಸಮಾಜದ್ದು, ಅದು ಮಾಡಿಕೊಂಡು ವಿಧಾಯಕ ವ್ಯವಸ್ಥೆಯದು. ಬದಲಾಗಿ ತಪ್ಪು ಮಾಡಿದವನನ್ನು ಪ್ರೋತ್ಸಾಹಿಸುತ್ತ, ಸಹಕಾರ, ಸಹಾಯ ನೀಡುತ್ತ ಉತ್ತೇಜಿಸುವುದು ಕುಂಟುಂಬದ ವಿನಾಶಕ್ಕೆ, ಸಮಾಜದ ಸರ್ವನಾಶಕ್ಕೆ ಆಹ್ವಾನ ಕೊಟ್ಟಂತಾಗಲಾರದೆ ? ಅನುಭಾವಿಗಳ ಮಾತೊಂದು ಇಲ್ಲಿ ನೆನಪಿಗೆ ಬರುತ್ತದೆ–"ಮಕ್ಕಳು ಸುಧಾರಿಸಬೇಕಾದರೆ ತಂದೆ ತಾಯಿಗಳು ಸುಧಾರಿಸಬೇಕು, ವಿದ್ಯಾರ್ಥಿಗಳ ಸುಧಾರಿಸಬೇಕೆಂದರೆ ಅಧ್ಯಾಪಕರು ಸುಧಾರಿಸಬೇಕು. ಜನಗಳು ಸುಧಾರಿಸ ಬೇಕೆಂದರೆ ಜನನಾಯಕರು ಸುಧಾರಿಸಬೇಕು, ನೌಕರರು ಸುಧಾರಿಸ ಬೇಕೆಂದರೆ ಅಧಿಕಾರಿಗಳು ಸುಧಾರಿಸಬೇಕು, ರೋಗಿಗಳು ಸುಧಾರಿಸಬೇಕೆಂದರೆ ವೈದ್ಯರು ಸುಧಾರಿಸಬೇಕು, ಹೆಂಗಸರು ಸುಧಾರಿಸ ಬೇಕೆಂದರೆ–ಗಂಡಸರು ಸುಧಾರಿಸಬೇಕು. ಭಕ್ತರು ಸುಧಾರಿಸಬೇಕೆಂದರೆ ಸ್ವಾಮಿಗಳು ಸುಧಾರಿಸಬೇಕು" ಕಾಲೇಜಿನಲ್ಲಿ ಓದುತ್ತಿದ್ದಾಗ ಪ್ರಾಧ್ಯಾಪಕರೊಬ್ಬರು ಸಹಪಾಟಿಯೊಬ್ಬನನ್ನು ಕುರಿತು ಹೀಗೆಂದಿದ್ದರು "ನೀನು ಯಾವುದಾದರೂ ಮಠಕ್ಕೆ ಸ್ವಾಮಿಯಾಗಬೇಕಾದ ಸಂದರ್ಭ ಬಂದರೆ ಮೊದಲು ನಿನ್ನನ್ನು ನೀನು ಸುಧಾರಿಸಿಕೋ ಮತ್ತು ನಿಯಂತ್ರಿಸಿಕೋ" ಎಂಬುದಾಗಿ "ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವೆ ಕಾಣಬಹುದು" ಎಂಬ ವಚನದ ಅರ್ಥ ಈಗೀಗ ಅರ್ಥವಾಗುತ್ತಿದೆ. ಅಕ್ಕನ ವಚನ ನೆನಪಿಗೆ ಬರುತ್ತದೆ "ಪರಿಣಾಮಿಗಳಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು" ಗೃಹಸ್ಥನಾಗಲಿ, ಪರಿಣಾಮದ ಸ್ವರೂಪವನ್ನರಿಯದೇ ಹೋದಲ್ಲಿ ಪರಿಶ್ರಮವೆಲ್ಲ ವ್ಯರ್ಥವಾದೀತು ! ಪರಿಣಾಮಿ ಪ್ರಸಾದಿಯಾದಾಗ ಗೃಹಸ್ಥನಿಗೆ ಮರ್ಯಾದೆ; ಸ್ವಾಮಿಗೆ ಗೌರವ, ಸಮಷ್ಟಿಗೆ ಹಿತ.



ಸಿದ್ಧಗಂಗಾ

# ಮಾಣಿಕ್ಯ ದೀಪ್ತಿ

## ಆರೋಗ್ಯ ರಹಸ್ಯ-೫
## ಮಸಾಲೆ

ಮಹಾತ್ಮ ಗಾಂಧಿ

ಹಿಂದಿನ ಅಧ್ಯಾಯದಲ್ಲಿ ನಾನು ಮಸಾಲೆ ಪದಾರ್ಥಗಳ ವಿಷಯವನ್ನು ಎತ್ತಲಿಲ್ಲ. ಉಪ್ಪು ಮಸಾಲೆ ದಿನಸುಗಳ ದೊರೆ. ಉಪ್ಪಿಲ್ಲದೆ ಅನೇಕರು ಊಟವನ್ನೇ ಮಾಡಲಾರರು. ಈ ದೇಹಕ್ಕೆ ಲವಣಗಳು ಅಗತ್ಯ. ನಾವು ದಿನವೂ ಬಳಸುವ ಉಪ್ಪು ಒಂದು ಲವಣ. ಆಹಾರ ಪದಾರ್ಥಗಳಲ್ಲೆಲ್ಲ ಈ ಲವಣಗಳು ಸಹಜವಾಗಿ ಇರುತ್ತವೆ. ಆದರೆ ಅಶಾಸ್ತ್ರೀಯವಾಗಿ ಅಡುಗೆ ಮಾಡಿದಾಗ, ಉಬಾ-ಅಕ್ಕಿಯನ್ನು ಬೇಯಿಸಿ ಗಂಜಿ ಬಸಿದಾಗ, ಆಲೂಗಡ್ಡೆಯನ್ನು ಇತರ ಕಾಯಿಪಲ್ಯಗಳನ್ನು ಬೇಯಿಸಿ ಆ ನೀರನ್ನು ಚೆಲ್ಲಿದಾಗ, ಅವುಗಳಲ್ಲಿದ್ದ ಲವಣ ಕಡಮೆಯಾಗುತ್ತದೆ. ಆಗ ಆಹಾರಕ್ಕೆ ಉಪ್ಪನ್ನು ಸೇರಿಸಿ ಆ ಕೊರತೆಯನ್ನು ಕಳೆಯಬೇಕು. ಉಪ್ಪು ದೇಹಕ್ಕೆ ಅತ್ಯಗತ್ಯವಾದ ಲವಣ. ಆದ್ದರಿಂದ ಅಲ್ಪ ಪ್ರಮಾಣದಲ್ಲಿ ಉಪ್ಪನ್ನು ಬಳಸಬಹುದೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದ್ದೇನೆ.

ಆದರೆ ಉಳಿದ ಅನೇಕ ಮಸಾಲೆ ದಿನಸು ದೇಹಕ್ಕೆ ಅಗತ್ಯವಿಲ್ಲ. ಉದಾ: ಒಣ ಮೆಣಸಿನಕಾಯಿ, ಹಸಿ ಮೆಣಸಿನಕಾಯಿ., ಮೆಣಸು, ಅರಿಸಿಣ, ಕೊತ್ತುಂಬರಿ ಬೀಜ, ಸಾಸುವೆ, ಮೆಂತ್ಯ, ಇಂಗು, ಸೋಪು ಇತ್ಯಾದಿ. ಇದನ್ನು ಉಪಯೋಗಿಸುವುದು ನಾಲಗೆಯ ರುಚಿಗೆ. ಈ ಐವತ್ತು ವರ್ಷದ ಸ್ವಂತ ಅನುಭವದಿಂದ ನಾನು ಹೇಳುತ್ತೇನೆ: ಆರೋಗ್ಯವಾಗಿ ಇರಲು ಇವು ಯಾವುದೂ ಅಗತ್ಯವಲ್ಲ. ಜೀರ್ಣಶಕ್ತಿ ಮಂದವಾದವರು ಔಷಧ ವೆಂದು ಇವನ್ನು ಕೆಲವು ಕಾಲ ಬಳಸಬಹುದು, ಅಗತ್ಯ ವಿದ್ದರೆ ಆದರೆ ರುಚಿಗಾಗಿ ಇವನ್ನು ಬಳಸಬಾರದು; ಬಿಡಬೇಕು. ಎಲ್ಲಾ ಮಸಾಲೆ ಪದಾರ್ಥಗಳೂ, ಉಪ್ಪು ಕೂಡ, ಕಾಯಿಪಲ್ಯದ ಧಾನ್ಯದ ಸ್ವಾಭಾವಿಕ ರುಚಿಯನ್ನು ಕೆಡಿಸುತ್ತವೆ. ಈ ರುಚಿಗಳ ಆಸೆಯಿಂದ ನಾಲಗೆಯನ್ನು ಕೆಡಿಸಿಕೊಳ್ಳದವರಿಗೆ ಉಪ್ಪು ಮುಂತಾದ ಮಸಾಲೆ ಪದಾರ್ಥ ಸೇರಿಸಿ ಮಾಡಿದುದಕ್ಕಿಂತ ಅವನ್ನು ಸೇರಿಸದೆಯೆ ಮಾಡಿದ ಆಹಾರ ಹೆಚ್ಚುರುಚಿಯಾಗಿರುತ್ತದೆ. ಆದುದರಿಂದ ಬೇಕಾದಾಗ ಉಪ್ಪನ್ನು ಜೊತೆಗೆ ಬಳಸಬಹುದು ಎಂದಿದ್ದೇನೆ. ಮೆಣಸಿನಕಾಯಿ ಬಾಯಿಗೆ ಖಾರ, ಹೊಟ್ಟೆಗೆ ಉರಿ. ಮೆಣಸಿನಕಾಯಿ ತಿನ್ನುವ ರೂಢಿಯಿಲ್ಲದವರಿಗೆ ಮೊದಮೊದಲು ಅದು ಸಹಿಸುವುದೇ ಇಲ್ಲ. ಮೆಣಸಿನಕಾಯಿ ಉಪಯೋಗಿಸಿ ಬಾಯಿಹುಣ್ಣು ಮಾಡಿಕೊಂಡ ಹಲವರನ್ನು ನೋಡಿದ್ದೇನೆ. ಒಬ್ಬ ಮನುಷ್ಯ ಇದ್ದ. ಅವನಿಗೆ ಮೆಣಸಿನಕಾಯಿ ಬಲು ಇಷ್ಟ. ಅದನ್ನೆ ಹೆಚ್ಚಾಗಿ ತಿಂದು ಅವನು ಅಕಾಲಮರಣಕ್ಕೆ ತುತ್ತಾದ. ದಕ್ಷಿಣ ಆಫ್ರಿಕಾದ ನೀಗ್ರೋ ಜನರು ಮಸಾಲೆಯನ್ನು ಮುಟ್ಟಲೇ ಮುಟ್ಟರು. ಆಹಾರದಲ್ಲಿ ಅರಿಸಿಣ ಬಣ್ಣವೇ ಬರಕೂಡದು ಅವರಿಗೆ. ಅದೇರೀತಿ ಇಂಗ್ಲೀಷರೂ ಮಸಾಲೆ ಪದಾರ್ಥಗಳನ್ನು ಸಹಜವಾಗಿ ಬಳಸರು.

## ಸಿದ್ಧಗಂಗೆಯ ದಾಸೋಹ ಮಂದಿರಕ್ಕೆ ಬಾಗಿಲುಗಳೇ ಇಲ್ಲ.

ಶ್ರೀ ಕ್ಷೇತ್ರದ ಸಿದ್ಧಗಂಗೆಗೆ ಹತ್ತಾದಿಕ್ಕುಗಳಿಂದ ದಾರಿಗಳು. ಶಿಕ್ಷಣಾಕಾಂಕ್ಷಿಗಳಾಗಿ ಬರುವ ವಿವಿಧ ತರಗತಿಗೆ ಸೇರಬಯಸಿದ ವಿದ್ಯಾರ್ಥಿಗಳಿಗೆ ಲೆಕ್ಕವಿಲ್ಲ, ಅದೊಂದು ಶೈಕ್ಷಣಿಕ ಮಹಾಪೂರ-ರಾಜ್ಯದ ನಾನಾ ಜಿಲ್ಲೆ ಗಳಿಂದ ವಿದ್ಯಾರ್ಥಿಗಳು ಪೋಷಕ ರೊಂದಿಗೆ, ಬಸ್ಸು, ಟ್ರೈನುಗಳಲ್ಲಿ ಆಗಮಿಸುವ ದೃಶ್ಯ. ದೂರದ ಬಿಜಾಪುರ, ಬೀದರ್, ಬಳ್ಳಾರಿ, ಗುಲ್ಬರ್ಗ, ರಾಯಚೂರು ಜಿಲ್ಲೆಗಳಿಂದ ಬರುವವರೇ ಈಗ ಹೆಚ್ಚು. ಅವರೆಲ್ಲ ದೂರದಿಂದ. ಬಂದವರು ನಿರಾಶರಾಗಿ ಹಿಂತಿರುಗಬಾರದು, ಎಂಬ ಕಳಕಳಿ ಶ್ರೀ ಕ್ಷೇತ್ರದ ಕುಲಪತಿಗಳಾಗಿರುವ ಪರಮಪೂಜ್ಯ ಶ್ರೀ ಶ್ರೀಗಳವರಿಗೆ. ಬಂದವರೆಲ್ಲರಿಗೆ ಪ್ರವೇಶಾನುಕೂಲ ಭಾಗ್ಯ, ಪರಿಣಾಮವಾಗಿ ಮಠದ ವಿದ್ಯಾರ್ಥಿಗಳ ಸಂಖ್ಯೆ ಕಳೆದ 1987-88 ರಲ್ಲಿ 3319 ವಿದ್ಯಾರ್ಥಿಗಳ ಸಂಖ್ಯೆ ಇದೀಗ 1988–89 ರಲ್ಲಿ ವಿದ್ಯಾರ್ಥಿಗಳ ಸಂಖ್ಯೆ 3020.

ಇಷ್ಟೊಂದು ಭಾರವನ್ನೂ ಜವಾಬ್ದಾರಿಯನ್ನು ಪರಮಪೂಜ್ಯ ಶ್ರೀ ಶ್ರೀಗಳವರ ಇಂದು ನಿಭಾಯಿಸುತ್ತಿದ್ದಾರೆ. ಸಮಾಜದ, ರಾಷ್ಟ್ರದ ಅಭಿವೃದ್ಧಿಯ ದೃಷ್ಟಿಯಿಂದ- ಸಮಾಜ ಬಾಂಧವರಾದ ನಾವುಗಳು- ನಮ್ಮ ಅಳಿಲು ಸೇವೆಯನ್ನು ಮಾಡಲು, ಕರ್ತವ್ಯ ಮುಖಿಗಳಾಗಬೇಕಾಗಿದೆ. ಅದು ತಮ್ಮಂಥ ದಾನಿಗಳಿಂದ ಉದಾರಿಗಳಿಂದ, ತುಂಬಿರಬೇಕಲ್ಲವೆ ? ತುಂಬಿ ಬರಲಿ ಎಂದು ವಿನಮ್ರ ಪ್ರಾರ್ಥನೆ.

ಸದ್ವಿನಿಯೋಗವಾದುದೆಲ್ಲ ಅಕ್ಷಯ ನಿಧಿಯಾಗುತ್ತದೆ–ಬದುಕಿಗೆ. ಶ್ರೀ ಕ್ಷೇತ್ರದ ದಾಸೋಹಕ್ಕೆ ತಾವು ಅರ್ಪಿಸುವ ಒಂದೊಂದು ಬಿಡಿ ಪೈಸೆಯೂ ಸಾರ್ಥಕವಾಗುತ್ತದೆ. ರಾಷ್ಟ್ರದ ಪುಣ್ಯದ ತೆನೆಗಳಾಗಿ ಅರಳುತ್ತಿರುವ ವಿದ್ಯಾರ್ಥಿಗಳ ಬದುಕಿಗೆ ಆಸರೆಯಾಗುತ್ತದೆ. ತುಂಬ ಹೃದಯದಿಂದ ನೀಡಿ. ನೀಡಿದ ಕೈ ಎಂದೂ ಬಡವಾಗುವುದಿಲ್ಲ. 'ಸಿದ್ಧಗಂಗಾ' ಮಾಡುತ್ತಿರುವ ಮನವಿ ಇದು.





## ಭಾರತ ಸ್ವಾತಂತ್ರ್ಯ ಮಧ್ಯರಾತ್ರಿಯಲ್ಲಿ-ಏಕೆ

( 14, 15, - ಅಗಸ್ಟ್ 1947 )

ಶ್ರೀ ಹೆಚ್. ರೇವಣಸಿದ್ದಪ್ಪ

3 ನೇ ಜೂನ್ 1947 ರಂದು ಭಾರತದ ಪ್ರಮುಖ ಮುಖಂಡರಲ್ಲಿ ನಾಲ್ವರು ವೈಸರಾಯ ಮೌಂಟ್‌ಬ್ಯಾಟನ್ ಕಾಂಗ್ರೆಸ್‌ನ ಜವಾಹರ್‌ಲಾಲ್ ನೆಹರೂ ಮುಸ್ಲಿಂ ಲೀಗಿನ ಜಿನ್ನಾ ನಂತರ ಮಹಾತ್ಮ ಗಾಂಧಿ – ಅಲ್ ಇಂಡಿಯಾ ರೇಡಿಯೋ ಮೂಲಕ ಭಾರತ ಮತ್ತು ಪಾಕೀಸ್ಥಾನ ರಚಿಸಲು ತಮ್ಮ ಒಪ್ಪಿಗೆಯನ್ನು ಪ್ರಕಟಿಸಿದರು.

ಅಂದು ವೈಸರಾಯ್ ಮೌಂಟಬ್ಯಾಂಟನ್ ಪ್ರೆಸ್ ಕಾನ್‌ಫರೆನ್ಸ್ ನಡೆಸಿದರು ಸಮಾರು 300 ಪತ್ರಿಕೋದ್ಯಮಿಗಳು — ಭಾರತ, ರಷ್ಯ, ಅಮೇರಿಕೆ, ಚೀನಾ, ಯೂರೋಪ್‌ನ ಪ್ರತಿನಿಧಿಗಳು ಭಾಗವಹಿಸಿದ್ದರು. ಪ್ರಶ್ನೋತ್ತರ ಸಮಯದಲ್ಲಿ ಒಬ್ಬ ಭಾರತೀಯ ಪತ್ರಿಕಾ ವರದಿಗಾರ ಕೇಳಿದ : ಸರ್ ಅಧಿಕಾರವನ್ನೂ ವಹಿಸಿಕೊಡಲು ತೀವ್ರ ಸಿದ್ಧತೆಗಳು ನಡೆಯುತ್ತಿರುವುದರಿಂದ ನಿಮ್ಮ ಮನಸ್ಸಿನಲ್ಲಿ ಒಂದು ದಿನಾಂಕವನ್ನೂ ನಿಗದಿ ಮಾಡಿಕೊಂಡಿದ್ದಿರಬಹುದಲ್ಲವೇ ? ಕೇಳಿದ. ಮೌಂಟ್‌ಬ್ಯಾಟನ್ ಹೌದು ಎಂದರು ಹಾಗಾದರೆ ಆ ದಿನಾಂಕ ಯಾವುದು ಎಂದು ಆ ವರದಿಗಾರ ಕೇಳಿದ ಮೌಂಟ್‌ಬ್ಯಾಟನ್ ಹೇಳಿದರು ಹೌದು ನಾನೊಂದು ದಿನಾಂಕವನ್ನೂ ಅರಿಸಿದ್ದೇನೆ. ಕೊನೆಯ ಅಧಿಕಾರ ವರ್ಗಾವಣೆ ಭಾರತಕ್ಕೆ 15 ನೇ- ಅಗಸ್ಟ್ 1947 ರಲ್ಲಿ ನಡೆಯಲಿದೆ. ಎರಡು ವರ್ಷಗಳ ಹಿಂದೆ 1945 ರಲ್ಲಿ ಆಗಸ್ಟ್ 15 ರಂದು ಬ್ರಿಟಿಷರು 2 ನೇ ವಿಶ್ವ ಯುದ್ಧದಲ್ಲಿ ಜಯಗಳಿಸಿ ವಿಜಯೋತ್ಸವ ಆಚರಿಸಿದ ನೆನಪಿಗೆ ಈ ಆಗಸ್ಟ್ 15 ನ್ನು ಆಚರಿಸಿದರು.

ಆ ದಿನದ ಪ್ರಕಟಣೆ ಸಿಡಿಲಿನಂತೆ ಮೊಳಗಿತು. ಯಾವ ಪಕ್ಷದವರೊಂದಿಗೂ ಸಮಾಲೋಚಿಸದೇ ಧಿಢೀರನೇ ಅ ದಿನ ಪ್ರಕಟಣೆ ಮಾಡಿದುದು ಆಶ್ಚರ್ಯವನ್ನುಂಟು ಮಾಡಿತು. ಯಾರೂ ಅದನ್ನು ಪ್ರಶ್ನಿಸಲಿಲ್ಲ ವಿರೋಧಿಸಲಿಲ್ಲ. ಭಾರತದಲ್ಲಿ ಯಾವ ಶುಭ ಮುಹೂರ್ತ ಗೊತ್ತು ಪಡಿಸಿಕೊಳ್ಳುತ್ತಿದ್ದರು.

ಆ ದಿನ ರೇಡಿಯೋ ಮೂಲಕ ಸ್ವಾತಂತ್ರದ ದಿನಾಂಕವನ್ನು ಪ್ರಸಾರ ಮಾಡಿದ ಕೂಡಲೇ ಪಂಚಾಂಗವನ್ನು ನೋಡಿದವರು ಅಂದು ಶುಕ್ರವಾರದ ಅಮಾವಾಸ್ಯೆಯಾಗಿದ್ದುದನ್ನು ಕಂಡುಕೊಂಡರು. ಕಾಶಿಯ ಪಂಡಿತರು ಆ ದಿನ ಮುಂದೂಡುವಂತೆ ಸಲಹೆ ನೀಡಿದರು ತಪ್ಪಿದರೆ ನಿರಂತರ ಅನಾಹುತಗಳಾಗುವುದೆಂದು ಅಭಿಪ್ರಾಯಪಟ್ಟರು. ಕಲ್ಕತ್ತಾದಲ್ಲಿ

ಸ್ವಾಮಿ ಮದನಾನಂದರು ನವಾಂಶದ ದೊಡ್ಡ ನಕ್ಷೆಯನ್ನು ತೆರೆದು ನೋಡಿ ನಕ್ಷತ್ರಗಳ ಸೂರ್ಯ ಚಂದ್ರ ಮತ್ತು ಗ್ರಹಗಳ ಸ್ಥಾನವನ್ನೂ ಗಮನಿಸಿದರು. ಅಗಸ್ಟ 15 ರಂದು ಭಾರತವು ಮಕರ ರಾಶಿಯಲ್ಲಿದ್ದು ವೈಶಮ್ಯಗಳ ಸೂಚನೆ ನೀಡಿತು. ಆ ದಿನ ಶನಿಯು ಪ್ರಭಾವದಲ್ಲಿದ್ದು ರಾಹುವಿನ ಪ್ರಭುತ್ವದಲ್ಲಿದ್ದು ದುಷ್ಪರಿಣಾಮಕಾರಿಯಾಗಿತ್ತು. ಅಗಸ್ಟ 14 ನೇ ಮಧ್ಯ ರಾತ್ರಿ ಯಿಂದ 15 ನೇ ಮಧ್ಯರಾತ್ರಿಯ ವರೆಗೆ ಶನಿ, ಗುರು, ಶುಕ್ರ, ಶಾಪಗ್ರಸ್ತ, ನೇ ಮನೆಯಲ್ಲಿ ಕರ್ಮ ಸ್ಥಾನದಲ್ಲಿದ್ದು ಅನಿಷ್ಟ ಸೂಚಕವಾಗಿತ್ತು.

ಸ್ವಾಮಿ ಮದನಾನಂದ ಖೇದದಿಂದ " ಎಂಥಾ ಕೆಲಸ ಮಾಡಿಬಿಟ್ಟಿದ್ದಾರೆ " ಎಂದು ನಿಟ್ಟುಸಿರು ಬಿಟ್ಟರು ತಕ್ಷಣವೇ ಒಂದು ಪತ್ರವನ್ನು ವೈಸರಾಯ ಮೌಂಟ್‌ಬ್ಯಾಟನ್ ಬರೆದು " ದೇವರ ಪ್ರೀತಿಗಾಗಿಯಾದರೂ ಭಾರತಕ್ಕೆ 15 ಅಗಸ್ಟ 1947 ರಂದು ಸ್ವಾತಂತ್ರವನ್ನು ಕೊಡಬೇಡಿ, ಶಾಪಗ್ರಸ್ಥ ದಿನವಾದ 15 ರಂದು ಭಾರತದ ಸ್ವಾತಂತ್ರ್ಯವಾದರೆ ಕಗ್ಗೊಲೆಗಳು ಬರಗಾಲ ನೆರೆ ಹಾವಳಿ ಅನಾಹುತಗಳು ಸಂಭವಿಸುತ್ತವೆ.

ದೆಹಲಿಯ ಜೋತಿಷಿಗಳು 14 ನೇ ದಿನ ಶುಭವಾಗಿದೆ ಎಂದು ಅಭಿಪ್ರಾಯ ಪಟ್ಟರು. ಆದರೆ 15 ನೇ ದಿನ ಸ್ವಾತಂತ್ರ್ಯ ಕೊಡುವುದಾಗಿ ನಿರ್ಧಾರವಾಗಿದ್ದ ಕಾರಣ ನೆಹರು ಒಂದು ಸಂಧಾನಕ್ಕೆ ಎಲ್ಲರನ್ನೂ ಒಪ್ಪಿಸಿದರು. ಅದರ ಪ್ರಕಾರ 14 ನೇ ದಿನ ಮಧ್ಯಾಹ್ನವೇ ಸಂವಿಧಾನಸಭೆಯನ್ನು ಕರೆಯಿಸಿ ಮಧ್ಯರಾತ್ರಿಯವರೆಗೆ ಸಮಾವೇಶಗಳನ್ನು ನಡೆಸಿ ಪಾಶ್ಚಾತ್ಯ ಕ್ಯಾಲೆಂಡರ್ ಪ್ರಕಾರ 12 ಗಂಟೆಗೆ 15 ನೇ ದಿನಾಂಕ ಆರಂಭವಾಗುವುದರಿಂದ 14 – 15 ರ ಮಧ್ಯರಾತ್ರಿ ಶೂನ್ಯ ಸಮಯದ ಶುಭ ಘಳಿಗೆಯಲ್ಲಿ ಸ್ವಾತಂತ್ರ್ಯ ಪಡೆಯುವಂತೆ ವ್ಯವಸ್ಥೆ ಮಾಡಲಾಯಿತು. ಆ ಸಮಯದಲ್ಲಿ ಅಧಿಕಾರದ ಹಸ್ತಾಂತರದ ದಾಖಲೆಗಳಿಗೆ ಪ್ರಧಾನ ಮಂತ್ರಿ ನೆಹರೂ ಮತ್ತು ವೈಸ್‌ರಾಯ್ ಮೌಂಟ್‌ಬ್ಯಾಟನ್ನರು ಸಹಿ ಹಾಕಿದರು. ( ಆಧಾರ : ಕಾಲಿನ್ಸ್ – ಲಾಪಿಯರ್, ಫ್ರಿದಂ ಅಡ್ ಮಿಟ್‌ನೈಟ್ ) ಮತ್ತು ದುರ್ಗಾದಾಸ್ : ಇಂಡಿಯಾ ಕರ್ಜನ್ ಟು ನೆಹರೂ )

---

ವಿಶ್ವಾಧಿಕೋ ರುದ್ರನ ಹೊಗಳುವ ಶೃತಿಗಳು,–
'ವಿಶ್ವರೂಪಾಯ ವೈ ನಮಃ'
'ಪರಮರೂಪನೆ ನಮೋ, ಪರತತ್ವನೆ ನಮೋ,
ಅದಿಯಾರೂಢಭಯಂಕರನೆ ನಮೋ.
ಹರಿಯನು ಹರಿಸಿದನೇ' ಎಂದು ಶೃತಿಯು ಸಾರುತ್ತಿರಲು-
ಸಂಹಾರಕಾರಣನೆ ನಮೋ, ನಮ್ಮ ಕೂಡಲಸಂಗಮದೇವಾ
ಮಹದ್ ಮಹದ್ಭ್ಯೋ ನಮಃ.

ಶ್ರೀ ಬಸವಣ್ಣನವರು

# ಮನುಷ್ಯ ಜೀವನ

ಮೂಡಣ ಬಾಂದಳ ದೆಳೆ ಚಂದ್ರನಂತೆ;
ಪ್ರವಹಿಸುವ ತಿಳಿಜಲ ದೆಳೆ ತೊರೆಯಂತೆ;
ಬೀಸುವ ಮಧುರತರ ಮಾರುತನಂತೆ;
ಉಷೆಯ ಮಸಕು ಬೆಳಕಿನಂತೆ ಬಾಲ್ಯವು;
ರಾಕಾ ಚಂದ್ರನ ವ್ಮೃತ ವರ್ಷದಂತೆ;
ಗಿರಿವನಗಳ ಅಬ್ಬರಿಪ ನದಿಯಂತೆ;
ಶೀಡುವ ಚಂಡತರ ಮಾರುತನಂತೆ;
ಬೇಸಿಗೆಯ ಉರಿಬಿಸಿಲಿಂತೆ ಯೌವನ.
ಪಡುವಣ ಬಾಂದಳ ದಿಳಿ ಚಂದ್ರನಂತೆ.
ಶಿರಧಿಯಲೆಗಳನು ಕಾಂಬ ನದಿಯಂತೆ.
ತುಹಿನ ಗಿರಿಯ ಕಠಿಣ ಮಾರುತನಂತೆ.
ತುಹಿನಾಗ ಮನದ ತೆರವಿಹುದು ಜರವು.
ಪಡುವಣ ಬಾನಿನೊಳಳಿದ ಪೆರೆಯಂತೆ
ಸಾಗರದದೊಳಿಳಿದ ಜಲರಾಶಿಯಂತೆ
ಚೇತನ ರಹಿತವಹ ಮಾರುತನಂತೆ
ಹೆಪ್ಪಾದ ಕಪ್ಪು ನಿಶೆಯಂತೆ ಸಾವು.

## ಪ್ರಸಾದ

ನಾವು ಸ್ವೀಕರಿಸುವ ಆಹಾರವೆಲ್ಲವೂ ಶಿವನ ಪ್ರಸಾದ, ಪ್ರಸಾದವನ್ನು ಹೆಚ್ಚಾಗಿ ತಿನ್ನಬಾರದು ದೇಹಕ್ಕೆ ಎಷ್ಟು ಆವಶ್ಯಕವೂ ಅಷ್ಟನ್ನು ಮಾತ್ರ ತೆಗೆದು ಕೊಳ್ಳಬೇಕು ಊಟಮಾಡುವಾಗ ಅತ್ತ ಇತ್ತ ಚೆಲ್ಲದಂತೆ ಎಚ್ಚರಿಕೆ ವಹಿಸಬೇಕು. ಒಂದೊಂದು ಅಗಳಿನಲ್ಲೂ ಜೀವಕಳೆ ಇರುತ್ತದೆ. ಜೀವಕ್ಕೆ ಚೈತನ್ಯ ರಸ ಇರುತ್ತದೆ. ಅದನ್ನು ಹಾಗೆ ವ್ಯರ್ಥಗೊಳಿಸಬಾರದು. ಅಲ್ಲದೆ ನಾವು ಆಹಾರವನ್ನು ತೆಗೆದು ಕೊಳ್ಳುವಾಗ ನಮ್ಮ ಮನೋಧರ್ಮ ಹೇಗಿರುತ್ತದೆಯೋ ಅದೇ ಭಾವನೆ ನಮ್ಮಲ್ಲಿ ಮೈಗೂಡಲು ಸ್ವಲ್ಪ ಮಟ್ಟಿಗೆ ಕಾರಣವಾಗುತ್ತದೆ. ಆದುದರಿಂದ ಒಂದೊಂದು ತುತ್ತನ್ನು ಉಣ್ಣುವಾಗಲೂ ಅದನ್ನು ಇತ್ತಿರುವ ದೇವನ ಸ್ವರೂಪವನ್ನು ಸ್ಮರಿಸಿಕೊಳ್ಳುತ್ತಿರಬೇಕು "

ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ.

# ಪುಣ್ಯ ಕ್ಷೇತ್ರಗಳು-೧೨

## ಮಹಾತ್ಮಾ ಶ್ರೀ ಗುರುಮಲ್ಲೇಶ್ವರ ಕ್ಷೇತ್ರ ದೇವನೂರು :-

ವ್ಯಾ|| ವಿ|| ಪ|| ಕೆ.ಪಿ. ಶಿವಲಿಂಗಯ್ಯ ಎಂ. ಎ, ಬಿ. ಇಡ್
425 – ಎಚ್ , ಕುಮಾರನಿಲಯ, ವಿಜಯನಗರ ಬೆಂಗಳೂರ, –40

**ಪೀಠಿಕೆ :** – ಪ್ರಸಿದ್ಧ ಶ್ರೀಕಂಠೇಶ್ವರ ಸ್ವಾಮಿ ಕ್ಷೇತ್ರವಾದ ನಂಜನಗೂಡಿಗೆ ಪೂರ್ವದಿಕ್ಕಿನಲ್ಲಿ ಸುಮಾರು ೯ ಮೈಲಿದೂರದಲ್ಲಿದೆ. ಹಿಂದೆ ಈ ಗ್ರಾಮವು ಸೋಮಳ್ಳಿ, ಮಿಣ್ಣಂಬಳ್ಳಿ, ಒಳಕೋಟೆ. ಯತ್ನಹಟ್ಟಿ, ಹಳ್ಳದಕೇರಿ, ಮೇಗಳಕೇರಿ, ಎಂಬ ಸಣ್ಣ ಸಣ್ಣ ವಿಭಾಗಗಳಿಂದ ಕೂಡಿದ್ದಿತು. ಇವುಗಳಲ್ಲಿ ಪುರದಯ್ಯ, ನಂಬಿನಾರಾಯಣ ಮುಖ್ಯವಾದುವು. ಸೋಮೇಶ್ವರ' ಬಸವೇಶ್ವರ, ವೀರಭದ್ರೇಶ್ವರ, ಸಿದ್ಧರಾಮೇಶ್ವರ, ಮಂಟೇ ಸ್ವಾಮಿ, ಮಲ್ಲೇದೇವ, ಮಾರಮ್ಮ, ವಿಘ್ನೇಶ್ವರ, – ಈ ದೇವಾಲಯಗಳೂ ಇವೆ. ಇವೆಲ್ಲಕ್ಕೂ ಕಲಶವಿಟ್ಟಂತೆ ಪವಾಡಪುರುಷರಾದ ಶ್ರೀ ಗುರು ಮಲ್ಲೇಶ್ವರ ಸ್ವಾಮಿ ಗದ್ದುಗೆಯೂ ಅವರ ಹೆಸರಿನ ದಾಸೋಹಮಠವೂ ಇವೆ.

**ಮುಮ್ಮಡಿ ಕೃಷ್ಣರಾಜ ಒಡೆಯರ ಧರ್ಮ ಬುದ್ಧಿ :-** ಸುಮಾರು ಒಂದನೂರೈವತ್ತು ವರ್ಷಗಳ ಹಿಂದಿನ ಮಾತು "ಮುಮ್ಮಡಿಯ ಕೃಷ್ಣಭೂಪ-ಮನೆಮನೆಗು ದೀಪ" ಎಂಬ ನಾಣ್ನುಡಿಯಂತೆ ಕ್ರಿ. ಶ. 1799 ರಿಂದ 1868ರ ವರೆಗೆ ಮೈಸೂರು ರಾಜ್ಯವನ್ನು ಆಳಿದ ಮಹಾರಾಜರು ಧರ್ಮಕಾರ್ಯ ಮಾಡುವುದರಲ್ಲಿ ಧುರೀಣರಾಗಿದ್ದರು. ಸಾಧುಸಂತರನ್ನು ಮಹಿಮಾಪುರುಷರನ್ನು ಕಂಡರೆ ಶ್ರದ್ಧಾ ಭಕ್ತಿಗಳಿಂದ ತಾವೇ ಸ್ವಯಂ ನಿಂತು ಸೇವೆ ಸಲ್ಲಿಸಲು ಸಿದ್ಧರಾಗುತ್ತಿದ್ದರು.

**ಗುರುಮಲ್ಲೇಶ್ವರರ ಆಗಮನ :-** ಆ ಕಾಲದಲ್ಲಿ ಮಹಾತ್ಮ ಗುರುಮಲ್ಲೇಶ್ವರರು ಉತ್ತರ ಕರ್ನಾಟಕದ ಕಡೆಯಿಂದ ಮೈಸೂರಿಗೆ ಲೀಲಾಮೂರ್ತಿಗಳಾಗಿ ದಯಮಾಡಿಸಿದರು. ಅವರೊಂದಿಗೆ ಅವರ ಕ್ರಿಯಾಮೂರ್ತಿಗಳಾದ ಶ್ರೀ ಮುಪ್ಪಿನ ಸ್ವಾಮಿಗಳೂ ತಾಯಿಯಂತೆ "ಸ್ವಾಮಿ"ಯವರನ್ನು ಪೋಷಿಸುತ್ತಿದ್ದ ಶರಣಮ್ಮನವರೂ, ಇವರಿಗೆಲ್ಲ ಸೇವೆ ಸಲ್ಲಿಸುತ್ತಿದ್ದ ಮತ್ತೊಬ್ಬ ವ್ಯಕ್ತಿಯೂ ಬಂದರು.

**ಗುರುಸ್ವಾಮಿಯವರ ಪವಾಡ :-** ಈಗಿನ ಮೈಸೂರು ನಗರದ ಬಸವೇಶ್ವರ ರಸ್ತೆ (ಹಿಂದಿನ ದೀವಟಿಗೆ ಬೀದಿ) ಯಲ್ಲಿರುವ ಶ್ರೀ ಮಹಾಲಿಂಗೇಶ್ವರ ಸ್ವಾಮಿ ಮಠ

ದಲ್ಲಿ ಸ್ವಾಮಿ ಇರುತ್ತಿದ್ದರು ಅಲ್ಲಿ ಪ್ರತಿದಿನವೂ ಶಿವಶರಣರನ್ನು ಕುರಿತಾದ ಕಾವ್ಯಗಳ ಪ್ರವಚನ ಕಾರ್ಯ ನಡೆಯುತ್ತಿದ್ದಿತು. ಒಂದು ದಿನ ಶರಣರ ಮಹಿಮೆಯ ಬಗೆಗೆ ವ್ಯಾಖ್ಯಾನ ನಡೆಯುತ್ತಿದ್ದಾಗ "ಈಗ ಅಂತಹ ಶರಣರು ಯಾರಿದ್ದಾರ್ರೀ ? ಎಲ್ಲಾ ಮೋಸ...." ಎಂದು ಆಡಿದ ಒಂದು ಧ್ವನಿ ಕೇಳಿ ಬಂದಿತು.

ಆ ಮಾತನ್ನು ಕೇಳಿ ಬೇಸರಗೊಂಡ ಗುರುಮಲ್ಲೇಶ್ವರರು ಚಾಕುವಿನಿಂದ ತಮ್ಮ ಹೊಟ್ಟೆಯನ್ನೇ ಬಗೆದು ಕರುಳು ಈಚೆಗೆ ಬರುವಂತೆ ಮಾಡಿದರು. ತತ್ ಕ್ಷಣ ಸುದ್ದಿ ಮಿಂಚಿನಂತೆ ಹರಡಿ, ಸ್ವಯಂ ಮಹಾರಾಜರೇ ಇದನ್ನು ನೋಡಲು ಧಾವಿಸಿದರು. ಅಷ್ಟರಲ್ಲಿ ತಾಯಿ ಶರಣಮ್ಮನವರು ಗುರುಪಾದೋದಕವನ್ನು ಸ್ವಾಮಿಯ ಉದರ ಪ್ರದೇಶಕ್ಕೆ ಸ್ಪರ್ಶಿಸಿದರು. ಆಶ್ಚರ್ಯವೆಂಬಂತೆ ಒಡನೆಯೇ ಮೊದಲಿದ್ದಂತೆ ಸರಿ ಹೋಯಿತು. !

**ಮಹಾರಾಜರ ಅರ್ಪಣೆ** :- ಮಹಾರಾಜರು ಗುರುಮಲ್ಲೇಶರನ್ನು ಅರಮನೆಗೆ ಬಿಜಯಂಗೈಸಿ ಧನಕನಕ ವಸ್ತು ವಾಹನಗಳನ್ನು ಸಮರ್ಪಿಸಿ. ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು ಆ ನೊರೆಗೆ ಸ್ವಾಮಿಯವರು ಮುಗುಳ್ನಕ್ಕು "ರಾಜರೇ ನಿಮ್ಮ ಸ್ವಂತ ದುಡಿಮೆಯೇನಾದರೂ ಇದ್ದರೆ ಅರ್ಪಿಸಿರಿ." ಎಂದರು. ಅದಕ್ಕೆ ಮುಮ್ಮಡಿಯವರು ಆಗಲಿ ಬುದ್ದೀ ನಾಳೆಯೇ ಅರ್ಪಿಸುತ್ತೇನೆ. ಎಂದು ವಿನಂತಿಸಿಕೊಂಡು, ಆ ರಾತ್ರಿಯೇ ಮಾರುವೇಷದಿಂದ ಕುಲುಮೆಯೊಂದರಲ್ಲಿ ಕಬ್ಬಿಣ ಚಚ್ಚಿ (ಹಾಗ-ಪಾವಲಿ) ನಾಣ್ಯ ಒಂದನ್ನು ಪಡೆದು ಮಾರನೆಯದಿನ ಶರಣರಿಗೆ ಅರ್ಪಿಸಿದರು. ಸ್ವಾಮಿಯವರು ಸಂತೋಷದಿಂದ ರಾಜರನ್ನು ಆಶೀರ್ವದಿಸಿ ಅವರಿತ್ತ ಒಡವೆ ವಸ್ತುಗಳನ್ನು ಪ್ರೀತಿಯಿಂದ ಸ್ವೀಕರಿಸಿದರು. ಇಂದಿಗೂ ಪ್ರತಿ ಗೌರಿ ಹಬ್ಬದ ದಿನ ದೇವನೂರು ಮಠದ ಸ್ವಾಮಿಗಳು ಅವನ್ನು ಧರಿಸಿ ಭಿಕ್ಷೆ ಸ್ವೀಕರಿಸಲು ಹೋಗುವ ಪದ್ಧತಿಯುಂಟು.

**ದೇವನೂರಿಗೆ ಆಗಮನ** :- ದೇವನೂರಿಗೆ ಪಟೇಲರಾಗಿದ್ದ ಸುಬ್ಬಣ್ಣನವರ ಶಂಕರಮ್ಮನವರಿಗೆ ಯಾವುದೋ ಭೂತ ಹಿಡಿದಿದ್ದು ಯಾವ ಪ್ರಯೋಗಕ್ಕೂ ಜಗ್ಗದೆ ಕೊನೆಗೆ ಅದೇ ಉಪಾಯ ಹೇಳಿತಂತೆ ! "ಗೌಡರೇ ಏಕೆ ವೃಥಾ ಶ್ರಮ ಪಡುತ್ತಿದ್ದೀರಿ ? ನಾನು ಯಾವ ಮಂತ್ರವಾದಿಗೂ ಜಗ್ಗುವನೆಂದು ತಿಳಿಯಬೇಡಿರಿ. ಮೈಸೂರು ಪಟ್ಟಣದಲ್ಲಿ ಭಕ್ತರನ್ನು ಉದ್ಧರಿಸುವ ಮಹಾತ್ಮ ಗುರುಮಲ್ಲೇಶ್ವರರು ಇಲ್ಲಿ ದಯಮಾಡಿಸುವಂತೆ ಮಾಡಿರಿ. ಅವರ ದರ್ಶನವಾದೊಡನೆ ನಾನು ನನ್ನಷ್ಟಕ್ಕೆ ಹೊರಟು ಹೋಗುವೆನು" ಎಂಬುದೇ ಆ ಸಲಹೆ !



ಸುಬ್ಬಣ್ಣನವರು ಮೈಸೂರು ಸೇರಿ ಪ್ರಯಾಸ ಪಟ್ಟು ಸ್ವಾಮಿಯ ಕೃಪೆಗೆ ಪಾತ್ರರಾಗಿದ್ದ ಚಿಕ್ಕಲಿಂಗಮ್ಮಯ್ಯನ ನೆರವಿನಿಂದ ತಮ್ಮ ಕಷ್ಟವನ್ನು ನಿವೇದಿಸಿಕೊಂಡು ಅದನ್ನು ನಿವಾರಿಸಲು ಬೇಡಿಕೊಂಡರು.

ದೇವನೂರಿನ ಪುಣ್ಯ ತುಂಬಿ ಬಂದಂತೆ ಸ್ವಾಮಿಯು ಕೃಪೆಮಾಡಿ ಆ ಗ್ರಾಮಕ್ಕೆ ದಯಮಾಡಿಸಿದರು. ಶಂಕರಮ್ಮನವರು ಭೂತದ ಕಾಟದಿಂದ ಬಿಡುಗಡೆ ಹೊಂದಿದರು. ಭಕ್ತ ದಂಪತಿಗಳು ಶ್ರೀ ಗುರುಮಲ್ಲೇಶ್ವರರನ್ನು ಅಲ್ಲಿಯೇ ನೆಲೆಸುವಂತೆ ಬೇಡಿದರು. ಅದಕ್ಕೆ ಸಮ್ಮತಿಸಿದ ಶ್ರೀ ಗುರುಮೂರ್ತಿ ಇಡೀ ಪ್ರಾಂತ್ಯವನ್ನೇ ಮಂಗಳ ಬೀಡನ್ನಾಗಿ ಮಾಡಿದರು.

**ಭಿಕ್ಷದ ಮಠಗಳು** :- ದೇವನೂರನ್ನು ಕೇಂದ್ರವನ್ನಾಗಿಸಿಕೊಂಡು ಸುತ್ತ ಮುತ್ತಲ ನೂರಾರು ಗ್ರಾಮಗಳಲ್ಲಿ ಭಕ್ತೋದ್ಧಾರ ಕಾರ್ಯವನ್ನು ಪ್ರಾರಂಭಿಸಿದ ಶ್ರೀ ಗುರುಮಲ್ಲೇಶ್ವರರು ಭಿಕ್ಷದ ಕಾಯಕ ಮಾಡಿಸಿ, ಅಲ್ಲಲ್ಲಿ ಭಿಕ್ಷದ ಮಠಗಳನ್ನು ಸ್ಥಾಪಿಸಿ ಅಸಂಖ್ಯಾತ ಶಿಷ್ಯರನ್ನು ಸೃಜಿಸಿದರು; ಅರ್ಥಾತ್ ಉಪದೇಶವಿತ್ತು ಕೃತಾರ್ಥರನ್ನಾಗಿಸಿದರು.

**ಗುರುಮೂರ್ತಿಯ ಆಕರ್ಷಣೆ** :- ಗುರುಸದೃಶರಾಗಿದ್ದ ಶ್ರೀ ಮುಪ್ಪಿನಸ್ವಾಮಿಗಳವರು ಶಿವನೊಳಗಾಗಲು ಅವರ ಗದ್ದುಗೆಯನ್ನು ಸ್ವಾಮಿಯವರೇ ನಿಂತುಮಾಡಿಸಿದರು. ಮಹಾಮಹಿಮರೂ ರೇಣುಕರ ಅವತಾರಿಗಳೂ ಆದ ಸ್ವಾಮಿಯವರಲ್ಲಿಗೆ ಬಿಳಿಗಿರಿಯ ರಂಗಯ್ಯನು ದಾಸಯ್ಯನಾಗಿಯೂ ಮಲೆಯ ಮಾದೇಶ್ವರರು ಕೊಡಲಿ ಸ್ವಾಮಿಯೋಗಿಯೂ ಬಂದಿದ್ದರೆಂದು ಸ್ಥಳದ ಹಿರಿಯರ ಅಂಬೋಣ! ಶಾಂತ ಮಲ್ಲೇಶ್ವರರೂ ಕೆಂಡಗಣ್ಣ ಸ್ವಾಮಿಯವರೂ ನಂಜನಗೂಡಿನ ನಂಜುಂಡಸ್ವಾಮಿಯೂ ಗುರುಸ್ವಾಮಿಯವರ ಜೊತೆಯಲ್ಲಿ ಇರುತ್ತಿದ್ದರಂತೆ! ಬೆಟ್ಟದಪುರದ ಚಿಕ್ಕವೀರ ದೇಶಿಕೇಂದ್ರರು, ಮಲ್ಲನಮೂಲೆಯ ದ್ವಿತೀಯ ಕಂಬಳೇಶ್ವರರು, ತುಮಕೂರು ಜಿಲ್ಲೆಯ ಬೆಳ್ಳಾವೆಯಲ್ಲಿ ಗದ್ದುಗೆಯಾಗಿರುವ ಖಾರದಸ್ವಾಮಿಗಳು, ಆಗಿನ ಸುತ್ತೂರು ವೀರ ಸಿಂಹಾಸನಾಧೀಶರಾಗಿದ್ದ ಹಿರಿಯ ಶಿವರಾತ್ರೀಶ್ವರರು' ಚಿತ್ತಲೆಸ್ವಾಮಿಗಳು ಈ ಮಹನೀಯರೆಲ್ಲ ಸ್ವಾಮಿಯದರ್ಶನಾರ್ಥವಾಗಿ ಬಂದು ಎಷ್ಟೋಕಾಲ ಸನ್ನಿಧಿಯಯಲ್ಲೇ ಇರುತ್ತಿದ್ದರು. ಇವರಲ್ಲಿ ಮೌನಿಸ್ವಾಮಿಗಳ, ಪಿಕ್ಕಸ್ವಾಮಿಗಳು, ಉದ್ದಂಡೆ ಸ್ವಾಮಿಗಳು ಶ್ರೀ ಮಠದಲ್ಲಿಯೇ ಗದ್ದುಗೆಯೊಗಿದ್ದಾರೆ.

**ಶಿಷ್ಯ – ಸಂಪತ್ತು** :- ಸಪ್ಪೆವೀರಪ್ಪತಾತ. ಮರಿಮಾದಪ್ಪತಾತ, ಉಡಿಗಾಲದ ಬಂಡಿಮರಪ್ಪತಾತ, ಕಾಮಗೆರೆಯ ಶಂಭುಲಿಂಗಪ್ಪತಾತ, ಶಿವಕಥೆಯ ಶಿವಪ್ಪ ಶಾಸ್ತ್ರಿಗಳು, ಕುದೇರಿನ ಕಿನಾರಿ ಸುಬ್ಬಣ್ಣ, ಕುರುಬೂರು ಮಣೆಗಾರ್ ಬಸವಣ್ಣ

ಹಾಗೂ ಗುರುಸ್ವಾಮಿಯವರ ಕರಕಮಲಸಂಜಾತರಾದ ಶ್ರೀ ಭಿಕ್ಷೇಶಪ್ರಭುಗಳು - ಇವರೆಲ್ಲ ಶ್ರೀ ಗುರುಮಲ್ಲೇಶ್ವರರ ನೆಚ್ಚಿನ ಶಿಷ್ಯರುಗಳು.

ಕ್ರಿ. ಶ. 1899 ರಲ್ಲಿ ಲಿಂಗದೊಳಗಾದ ಶ್ರೀ ಗುರುಮಲ್ಲೇಶ್ವರರ ತೇಜೋಭರಿತವಾದ ಗದ್ದುಗೆಯನ್ನು ಸ್ಥಾಪಿಸಿದ 'ಭಿಕ್ಷದಪ್ಪ' ನವರು ಅದರ ನಿತ್ಯಪೂಜಾದಿಗಳಿಗೆ ಉತ್ತಮ ವ್ಯವಸ್ಥೆ ಮಾಡಿದರು.

ಇದೀಗ 'ಶ್ರೀ ಗುರುಮಲ್ಲೇಶ್ವರ ಸುಪ್ರಭಾತ' ದ ಕೆಲಭಾಗವನ್ನು ಮನನ ಮಾಡೋಣ :-

ರಾಗ : ಬಿಲಹರಿ -

ಶ್ರೀಮನ್ನಿಂಜನನೆ ಭವಪಾಶಭೇದಕನೆ
ಕಾಮಸಂಹರ ಶಿವನೇ ರೇಣುಕರ ಅವತಾರಿ
ಪಾಮರರನುದ್ಧರಿಸ ದೇವನೂರಿನ ವಿಭುವೆ
ಸ್ವಾಮಿ ಗುರುಮಲ್ಲೇಶ ತವ ಸುಪ್ರಭಾತಂ

ಶಿವಸಿದ್ಧಲಿಂಗೇಶ ಶಿಶುವಾಗಿ ಕಂಡಂತೆ
ಶಿವನಂಶ ತಾ ಬಂದು ಗುರು ರೂಪುಗೊಂಡಂತೆ
ಶಿವಕರುಣೆಯಿಂ ನೀವು ಬಂದಿರಿ ವಿನೋದದಲಿ
ಶಿವನೆ - ಗುರುಮಲ್ಲೇಶ ತವ ಸುಪ್ರಭಾತಂ

ಮುಮ್ಮಡಿಯ ಕೃಷ್ಣಭೂವರನ ಮಹಿಶೂರಲ್ಲಿ
ಬೊಮ್ಮವರಿಯುವ ಬೀಡು ಮಹಲಿಂಗ ಮಠದಲ್ಲಿ
ಸಮ್ಮುಖದಿ ಶಿವಕಥೆಯ ಕೇಳುತಿರುವಾಗಲ್ಲಿ
ನಮ್ಮ - ಗುರುಮಲ್ಲೇಶ ತವ ಸುಪ್ರಭಾತಂ

ರಾಗ - ಹಿಂದೋಳೆ :-
ಹರಭಕ್ತರಾರಿಹರೊ ಅಂತಪ್ಪರೀಗಿಲ್ಲಿ
ಒರೆದದ್ದು ಅಣಕದಂತಾಗಿತ್ತು ತವಮನದಿ
ಕರುಳನ್ನು ನೀ ಬಗೆದು ತೋರಿರಿ ಮಹಿಮೆಯ ಮೆರೆದೆ
ಗುರುವೆ - ಗುರುಮಲ್ಲೇಶ ತವ ಸುಪ್ರಭಾತಂ



ತಾಯಿ ಶಿವಶರಣಮ್ಮ ಗುರುಪಾದ ತೀರ್ಥದಿಂ
ಮಾಯಿಸಲು ಗಾಯವನು ಅಣಕಿಗಳುಬೆದರಿದರು
ಕಾಯದಿಚ್ಛೆಯ ನುಳಿದು ಗುರುಮಹಿಮೆ ಪಾಡಿದರು
ರಾಯ - ಗುರುಮಲ್ಲೇಶ ತವ ಸುಪ್ರಭಾತಂ

ಕಂತೆ ಭಿಕ್ಷೆಯ ಗೈಸಿ ಚಿಂತೆ ಶಿವನೊಳಗಿರಿಸಿ
ಅಂತಪ್ಪರಾಜರನೆ ಕಾಯಕಕೆ ಯೋಜಿಸಿದೆ
ಕಂತುಹರ ಬಕುತಿಯನು ಎತ್ತಲುಂ ಬೀರಿದೈ
ಅಂತ - ಗುರುಮಲ್ಲೇಶ ತವ ಸುಪ್ರಭಾತಂ

ರಾಗ - ಮೋಹನ :-
ದೇವನೂರಿನ ಪುಣ್ಯವದು ಫಲಿಸಿ ಬಂದಿತ್ತು
ಆವುದೋ ಭೂತ ತಾ ಶಂಕರಮಗೊದಗಿತ್ತು
ದೇವರಕ್ಷಿಸು ಎಂದು ಬೇಡಿದರು ಸುಬ್ಬಣ್ಣ
ಕಾವ - ಗುರುಮಲ್ಲೇಶ ತವ ಸುಪ್ರಭಾತಂ

ಗುರುಬರಲು ಗ್ರಹಪೀಡೆ ಹರುಷದಿಂ ತೊಲಗಿತ್ತು
ಗುರುವ ದರ್ಶಿಪ ಬಯಕೆಯದು ಪೂರ್ಣಗೊಂಡಿತ್ತು
ಹರನಾಜ್ಞೆಯಿಂ ಗುರುವು ಕೃಪೆಮಾಡಿ ನೆಲೆಸಿದರು
ಪರಮ - ಗುರುಮಲ್ಲೇಶ ತವ ಸುಪ್ರಭಾತಂ

ಉಪಸಂಹಾರ :-

ಅಂತೂ 'ಶರಣರು ಮೆಟ್ಟಿದ ಧರೆಪಾವನ' ಎಂಬಂತೆ ಶ್ರೀ ಗುರುಮಲ್ಲೇಶ್ವರರು ಪದಾರ್ಪಣ ಮಾಡಿ ಉದ್ಧರಿಸಿದ 'ದೇವನೂರು' (ಅನ್ವರ್ಥವಾಗಿ) ಸಾರ್ಥಕವಾಗಿದೆ. ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ 'ಗುರುದೇವ' ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಾದಿಯಾಗಿ ನಾಡಿನ ಎಲ್ಲ ಶ್ರೀ ಗಳವರೂ ಈ ಪುಣ್ಯ ಕ್ಷೇತ್ರಕ್ಕೆ ದಯಮಾಡಿಸಿ ಅದನ್ನು ಮತ್ತೂ ಪುನೀತಗೊಳಿಸಿದ್ದಾರೆ. ಎಂದರೆ ಅತಿಶಯೋಕ್ತಿಯೇನಲ್ಲ

# ತುಮಕೂರು ಸೋಮೇಶ್ವರ ದೇವಾಲಯದ ಶಾಸನ

ಶಿವತಾರಕ ಮತ್ತು ರೇವಣಸಿದ್ದಪ್ಪ
ಇತಿಹಾಸ ಪರಿಷತ್ತು ಸಿದ್ಧಗಂಗಾ ಕಾಲೇಜು ತುಮಕೂರು

ಕ್ರಿ. ಶ. 955 (877 ಶಕ ವರ್ಷ) ಈ ಶಾಸನವು ಗಂಗರ ಕಾಲದ್ದು. ಇದರಲ್ಲಿ ತುಮ್ಮೆಗೂರು ಎಂಬ ಹೆಸರು ಕಂಡುಬರುತ್ತದೆ. ಈ ಶಾಸನದ ಅರ್ಧ ಭಾಗ ಮಾತ್ರ ದೊರೆತಿದೆ. ಉಳಿದ ಭಾಗದ ಕಲ್ಲು ತುಂಡಾಗಿ ಹೋಗಿದೆ. ಅದು ಲಭ್ಯವಾಗಿಲ್ಲ. ಇದರಲ್ಲಿ 12 ಸಾಲು ಕಂಡು ಬರುತ್ತವೆ.

ಸಾರಾಂಶ:- ಈ ಕೆರೆಯನ್ನು ಸೋಮೆ ಕಟ್ಟೆ ಎಂದು ಕರೆಯಲಾಗಿದೆ. ಈ ಕೆರೆಯ ನೀರಿನ ಬಳಕೆಯ ಮೇಲ್ವಿಚಾರಣೆಗಾಗಿ ಬಿಟ್ಟೆಯಣ್ಣನೆಂಬ ಅಧಿಕಾರಿಯನ್ನು ನೇಮಿಸಲಾಗಿತ್ತು. ಅವನಿಗೆ 12 ಖಂಡುಗ ಬಿತ್ತುವಷ್ಟು ಭೂಮಿಯನ್ನು ಕೊಟ್ಟು ಬ್ರಹ್ಮಪುತ್ರ ಎಂಬ ಬಿರುದನ್ನು ಕೊಡಲಾಗಿತ್ತು. ಈ ಬಿರುದನ್ನು ಕಂದಮಯ್ಯನ ಮಗ ಅಜ್ಜವಯ್ಯನು ಕೊಟ್ಟನೆಂದು ತಿಳಿದು ಬರುತ್ತದೆ.

**ಸಾಲು**

1 ... ಶಕವರ್ಷ ೮೭೭ .. ಕ್ಷಶನೆಂಬ...
2 ದೊಳ್ತುಮ್ಮೆಗೂರ ಕೆರೆಯವಾಳಿದೊ....
3 ಉಣ್ಯರ ಬೆಸದೊಳೆ ಕನ್ದಮ ಮಕ್ಕಳ್ ಅಜ್ಜವಯ್ಯ
4 ತ್ತಿಯ್ಯಣ್ನ ಸಮ
5 ರೆಯ ಯೊಡೆಯಂಕಟ್ಟೆ
6 ಕಟ್ಟೆದಯೊಟ್ಟೆ ಜ್ಞಾಪನ್ನಿರ್ಖಂ
7 ಣ್ಡುಗಮಣ್ನು ಬಿತ್ತುವಟ್ಟಮುಮಂಬ್ರಹ್ಮ
8 ಪುತ್ರ ರಮನ್ದು ವೆಸರುಮಂ ಕೊಟ್ಟು ಪಟ್ಟಂಗಟ್ಟೆ
9 ಮ ವಾಕುಂಮೂರು ದೂರೆಯುಂಯೊನ್ದಂ
10 ಈತ್ತರು ಕಾತ್ತಿಂಗೆಯು ಬೆಸಗೆಯೆನ್ದಡೆ
11 ನಡೆಯಿಸುಗಂ ಬಹುಭಿವೃದಿ ಸುಧಾ ಭುಕ್ತಾ
12 ರಾಜ....ಟೆಯಸ್ಯಾಯ ಸ್ನಾಯದಾ ಭೂಮಿ .... .... ....



ಮಕ್ಕಳಿಗೆ ಶಿವಶರಣರ ಕಥಾ ಮಾಲಿಕೆ

# ಇಳೆಯಾಂಡ ಗುಡಿಮಾರ-೧

—:ಬಿ. ನಂಜುಂಡಪ್ಪ

ಇಳೆಯಾಂಡ ಗುಡಿ ಎಂಬುದು ಚೋಳದೇಶದ ಒಂದು ಪ್ರಸಿದ್ಧವಾದ ಪಟ್ಟಣ. ಅಲ್ಲಿ ಇಳೆಯಾಂಡ ಗುಡಿಮಾರನೆಂಬ ಒಬ್ಬ ಭಕ್ತನಿದ್ದನು. ಆತನು ಮಾಡುತ್ತಿದ್ದುದು ಆರಂಭ ಕೆಲಸ.

ಇಳೆಯಾಂಡ ಗುಡಿಮಾರ ಬಹಳ ಸರಳ ಸ್ವಭಾವದವನು; ದೈವಭಕ್ತಿ ಪರನು ತನ್ನ ಕಾಯಕದಿಂದ ಸಂಪಾದಿಸಿದ ಹಣದಲ್ಲಿ ಕೇವಲ ಸ್ವಲ್ಪ ಭಾಗವನ್ನು ತನ್ನ ಜೀವನಕ್ಕಾಗಿ ಇರಿಸಿಕೊಂಡು- ಉಳಿದ ಬಹಳ ಭಾಗವನ್ನು ಶರಣ ದಾಸೋಹಕ್ಕಾಗಿ ವಿನಿಯೋಗಿಸುತ್ತಿದ್ದನು. ಆತನು ತನ್ನ ಬಳಿಗೆ ಬಂದ ಭಕ್ತರನ್ನು ಬಹಳ ಕಿಂಕುರ್ವಾಣಭಾವದಿಂದ ಕಂಡು ತನ್ನ ಸರ್ವಸ್ವವನ್ನೂ ಅವರಿಗೆ ಒಪ್ಪಿಸಿ ಬಿಡುತ್ತಿದ್ದನು. ಆದುದರಿಂದ ಭಕ್ತರು ಆತನ ಬಳಿಗೆ ತಂಡ ತಂಡವಾಗಿ ಬರುತ್ತಿದ್ದರು.

ಇಳೆಯಾಂಡ ಗುಡಿಮಾರನ ದಾಸೋಹ ವೃತ್ತಿ ದಿನೇ ದಿನೇ ಹೆಚ್ಚಿತು. ಇದ್ದ ಬೂಮಿ ಕಾಣೆಯನ್ನೆಲ್ಲಾ ಮಾರಿಬಿಟ್ಟು ಎಲ್ಲವನ್ನೂ ಆತನು ದಾಸೋಹಕ್ಕಾಗಿ ವಿನಿಯೋಗಿಸಿದನು. ತೋಟವನ್ನೂ ಮಾರಿದುದಾಯಿತು. ಕೊನೆಗೆ ಅರ್ಧಮನೆಯೂ ಹೋಯಿತು ಉಟ್ಟುದು ತೊಟ್ಟುದು ಎಲ್ಲವೂ ಭಕ್ತರಿಗೆ ಸೇರಿತು ಕಡೆಯಲ್ಲಿ ಉಳಿದುದು: ತನ್ನ ಹೆಂಡತಿ ಗೊಂದು ಚಿಂದಿ ಬಟ್ಟೆ, ತನಗೂ ತನ್ನ ಮಗನಿಗೂ ಒಂದೊಂದು ಹರಕು ಚಿಂದಿ; ಇರಲು ಸ್ವಲ್ಪ ಮನೆ. ಆದರೆ ಅವರ ಪಾಲಿಗೆ ಉಳಿದ ದೊಡ್ಡ ಆಸ್ತಿಯೆಂದರೆ ಅವರ ವಿಶಾಲಹೃದಯ. ಅಷ್ಟಾದರೂ ಅವರ ಮನಸ್ಸು ಶರಣ ಸೇವೆಗಾಗಿ ತವಕ ಪಡುತ್ತಿತ್ತು. ಧನವಿಲ್ಲದಿದ್ದರೇನು; ಧಾನ್ಯವಿಲ್ಲದಿದ್ದರೇನು; ಮನೆಯಿಲ್ಲದಿದ್ದರೇನು ? ತನ್ನ ದೇಹ ಮನ ಪ್ರಾಣಗಳನ್ನೂ ಶರಣ ಸೇವೆಗೆ ಸವೆಸಿ ಬಿಡಬೇಕೆಂಬುದು ಇಳೆಯಾಂಡ ಗುಡಿಮಾರನ ನಿರಂತರವಾದ ಹಂಬಲ.

ಈ ರೀತಿಯ ಪರೋಪಕಾರ ಬುದ್ಧಿಯ ನಿಸ್ಪೃಹ ಜೀವನದಿಂದ ಆತನು ಬಾಳು ಸಾಗಿಸಿದನು ವಯಸ್ಸು ತೊಂಭತ್ತಾಯಿತು.

ಒಂದು ದಿನ ರಾತ್ರಿ ಎಂದೂ ಇಲ್ಲದ ಕಾರ್ಮೋಡಗಳು ಕೂಡಿ, ಆಕಾಶದಲ್ಲಿ ಮಿಂಚೂ ಗುಡುಗೂ ಕಾಣಿಸಿಕೊಂಡವು. ಆಕಾಶ ಹೆಪ್ಪುಗಟ್ಟಿದಂತಿತ್ತು. ದೊಡ್ಡ ಮಳೆ ಬಂತು. ಭೂಮಿ ನೀರಿನಲ್ಲಿ ತೇಲಿ ಬಿಡುವುದೋ ಎನ್ನುವಷ್ಟು ಮಳೆ. ಕಗ್ಗತ್ತಲು ಕವಿದು ದಿಕ್ಕುಗಳೇ ಕಾಣುತ್ತಿರಲಿಲ್ಲ.

ಪರಮೇಶ್ವರನು ತನ್ನ ಭಕ್ತ ಇಳೆಯಾಂಡ ಗುಡಿಮಾರನನ್ನು ಪರೀಕ್ಷಿಸಲು ಬಂದುದು ಆ ದಿನವೇ. 'ಶಿವನು ಒಬ್ಬ ಮುದುಕನ ವೇಷ ಧರಿಸಿ ಆ ಭಯಂಕರ ಸಿಡಿಲು ಗುಡುಗುಗಳ ಮಧ್ಯೆ ಮಳೆಯಲ್ಲಿ ನೆನೆದು, ಚಳಿಯಿಂದ ನಡುಗಿ, ಬಹಳ ಆಯಾಸ ಪಟ್ಟವನಂತೆ ತೋರಿ, ಇಳೆಯಾಂಡ ಗುಡಿಮಾರನ ಮನೆಯ ಬಾಗಿಲಲ್ಲಿ ಬಂದು ನಿಂತನು. ಒಳಗೆ ಇಳಿಯಾಂಡ ಗುಡಿಮಾರನು ಹೊದೆಯಲು ಬಟ್ಟೆಯಿಲ್ಲದೆ. ಹರುಕು ಸುತ್ತಿಕೊಂಡು ಚಳಿಯಲ್ಲಿ ನಡುಗುತ್ತಿದ್ದನು. ಆದರೆ ಆತನ ಮನಸ್ಸು ಪರಮಾತ್ಮನ ಧ್ಯಾನದಲ್ಲಿ ತೊಡಗಿತ್ತು.

ಬಾಗಿಲ ಹೊರಗೆ "ಹರ ಹರ" "ಶಿವ ಶಿವ" ಎಂಬ ಶಬ್ದ ಕೇಳಿಸಿತು. ಯಾರೋ ಭಕ್ತರು ಬಂದಿರಬಹುದೆಂದು ತಿಳಿದು ಇಳೆಯಾಂಡ ಗುಡಿಮಾರನು ಕೂಡಲೇ ಆತುರದಿಂದ ಎದ್ದು ಬಂದು. ಬಾಗಿಲು ತೆರೆದನು. ಮೈಯೆಲ್ಲಾ ಸುಕ್ಕುಗಟ್ಟಿ ಕೋಲೂರಿ ನಿಂತ ಒಬ್ಬ ವೃದ್ಧ ಭಕ್ತನು ಕಂಡನು. ಆತನ ಮೈಸೊರಗಿ. ಹೋಗಿತ್ತು; ಕಣ್ಣು ಹುಬ್ಬುಗಳು ಜೋಲು ಬಿದ್ದಿದ್ದವು. ತಣ್ಣೀರಿನಲ್ಲಿ ಮುಳುಗಿದಂತೆ ಆತನ ಮೈ ನೆನೆದಿತ್ತು. ಗಡಗಡನೆ ನಡುಗುತ್ತಿದ್ದ ಆ ಮುದುಕನನ್ನು ಕೈ ಹಿಡಿದು, ಮನೆಯೊಳಕ್ಕೆ ಕರೆತಂದು ನಮಸ್ಕರಿಸಿ, ಕುಳ್ಳಿರಿಸಿದನು. ಬಳಿಕ, ಇಳೆಯಾಂಡ ಗುಡಿಮಾರನು ವಿನಯದಿಂದ, ಆತನನ್ನು ಕುರಿತು "ಸ್ವಾಮಿ, ಇದೇನು, ನಡುರಾತ್ರಿ ಕಗ್ಗತ್ತಲಲ್ಲಿ ಬಂದಿದ್ದೀರಿ ? ಮಳೆ ಜೋರೆ; ಮೈಯೆಲ್ಲಾ ನೆಂದು ಹೋಗಿದೆ " ಎಂದು ಕೇಳಿದನು. ವೃದ್ಧನು ನಡುಗಿ "ಅಪ್ಪಾ, ಚಳಿ ಬಹಳ; ಶೈತ್ಯದಿಂದ ಪ್ರಾಣ ಹೋಗುತ್ತಿದೆ. ನಿಲ್ಲಲಾರೆ, ಕೈಕಾಲುಗಳಲ್ಲಿ ತ್ರಾಣವೇ ಇಲ್ಲ. ದೇಹವೆಲ್ಲಾ ಚಳಿಯ ದೆಸೆಯಿಂದ ಮರವಾಗಿ ಬಿಟ್ಟಿದೆ„ ಎಂದನು.

ಉಪ್ಚೋಪಚಾರಗಳಿಂದ ಆ ವೃದ್ಧ ಭಕ್ತನನ್ನು ಸಂತೈಸಬೇಕೆನಿಸಿತು, ಆದರೆ ಮನೆಯಲ್ಲಿ ಒಂದು ಕಡ್ಡಿ ಸೌದೆಯೂ ಇರಲಿಲ್ಲ. ಇಳೆಯಾಂಡ ಗುಡಿಮಾರನು ಸ್ವಲ್ಪವೂ ತಡಮಾಡದೆ. ತನ್ನ ಮನೆಯ ಒಂದು ಜಂತೆಯನು ಕಿತ್ತು, ಬೆಂಕಿಹೊತ್ತಿಸಿದನು. ಆ ಬೆಂಕಿಯ ಕಾವಿನಿಂದ ಆ ಮುದುಕನನ್ನು ಉಪಚರಿಸತೊಡಗಿದನು. ಆದರೆ, ಎಷ್ಟು ಕಾಸಿದರೂ ಮುದುಕನ ಮೈನಡುಕ ಹರಿಯಲಿಲ್ಲ, ಇಳಿಯಾಂಡ ಗುಡಿಮಾರನು ಆತನ ತೋಳು, ತೊಡೆ, ಪಾದ, ಎದೆ, ಬೆನ್ನು ಕೆನ್ನೆ-ಎಲ್ಲವನ್ನೂ ಬೆಂಕಿಯಲ್ಲಿ ಕಾಸಿ, ತನ್ನ ಕೈಗಳಿಂದ ಒತ್ತಿದನೂ. ನಡುಗುವುದು ನಿಂತಿತು ಚಳಿಯೇನ್ನೋ ಕಡಿಮೆಯಾಯಿತು. ಆದರೆ, ಶಾಖ ಹೆಚ್ಚಿದಂತೆಲ್ಲಾ ಮುದುಕನಿಗೆ ಹಸಿವು ಹೆಚ್ಚಾಯಿತು.

ಮುದುಕನ ಹಸಿವಿನ ಕೊರಗು ಗಳಿಗೆ ಗಳಿಗೆಗೂ ಹೆಚ್ಚಾಗುತ್ತಾ ಬಂದಿತು. ಆದರೆ, ಮನೆಯಲ್ಲಿ ಏನೂ ಇರಲಿಲ್ಲ. ಇಳೆಯಾಂಡ ಗುಡಿಮಾರನು ಊಟಮಾಡಿ



ಅಂದಿಗೆ ಮೂರುದಿನಗಳಾಗಿದ್ದವು. ವೃದ್ಧನು ಹಸಿವೆಂದು ಕೂಡಲೇ ಆತನಿಗೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಆದರೆ, ಆತನ ಹೆಂಡತಿ ಬಹಳ ಸೂಕ್ಷ್ಮ ಬುದ್ಧಿಯುಳ್ಳವಳಾದುದರಿಂದ ಗಂಡನ ಸ್ಥಿತಿಯನ್ನು ಅರಿತ ಆಕೆಗೆ ತಟ್ಟನೆ ಒಂದು ಆಲೋಚನೆ ಹೊಳೆಯಿತು' ಕೂಡಲೆ. ಆಕೆ ತನ್ನ ಗಂಡನ ಬಳಿ ಬಂದು, ಪಿಸುಮಾತಿನಲ್ಲಿ. ಆ ಹಿಂದಿನ ದಿನ ಹೊಲದಲ್ಲಿ ಬಿತ್ತಿದ್ದ ಬೀಜದ ಕಾಳುಗಳನ್ನು ಆರಿಸಿ ತರುವಂತೆ ಹೇಳಿದಳು. ಸಮಯೋಚಿತವಾದ ಆಕೆಯ ಸಲಹೆ ಆತನಿಗೆ ಸರಿಯೆನಿಸಿತು-ಬಹಳ ಉತ್ಸಾಹದಿಂದ ಇಳೆಯಾಂಡ ಗುಡಿಮಾರನು. ಬಿತ್ತಿದ ಕಾಳುಗಳನ್ನು ಆರಿಸಿ ತರುವುದಕ್ಕಾಗಿ, ಆ ಮಧ್ಯರಾತ್ರಿಯಲ್ಲೇ ತನ್ನ ಹೊಲದ ಕಡೆ ಹೊರಟನು.

ಇಳೆಯಾಂಡ ಗುಡಿಮಾರನು ಮನೆ ಬಿಟ್ಟು ಹೊರಗೆ ಹೊರಟ ವೇಳೆಗೆ ಸರಿಯಾಗಿ ಮಳೆಯ ಹೊಡೆತ ಮತ್ತು ಚಳಿಯ ಕೊರೆತ ಮತ್ತಷ್ಟು ಹೆಚ್ಚಾಯಿತು. ಕಾರ್ಗತ್ತಲೆ ತುಂಬಿತ್ತು. ಆದರೆ ಆತನು ಯಾವುದನ್ನೂ ಲೆಕ್ಕಿಸಲಿಲ್ಲ. ದಾರಿಯಲ್ಲಿ ಸಿಕ್ಕಿದ ಹೊಲ ಹಳ್ಳ ಕೆರೆತೊರೆಗಳನು ದಾಟಿ ತನ್ನ ಹೊಲಕ್ಕೆ ಬಂದನು ಬಳಿಕ, ಅಲ್ಲಿ ಬಿತ್ತಿದ್ದ ಕಾಳುಗಳನ್ನೆಲ್ಲಾ ಆಯ್ದು ಶೇಖರಿಸಿ, ಮನೆಗೆ ತಂದನು.

ಇಳೆಯಾಂಡ ಗುಡಿಮಾರನ ಪತ್ನಿ ಒಲೆ ಹೊತ್ತಿಸಿ, ತನ್ನ ಗಂಡನು ತಂದ ಬೀಜದ ಕಾಳಿನಿಂದ ಅನ್ನ ಮಾಡಿದಳು. ಕೀರೆಸೊಪ್ಪಿನ ಮೇಲೋಗರವೂ ಸಿದ್ಧವಾಯಿತು.

ಆದರೆ, ಅದು ಕಠಿಣ ಪರೀಕ್ಷೆಯ ಸಮಯ! ಊಟಕ್ಕೆ ಬಾಳೆಯಲೆ ತರಲು ಹೋದ ಮಗನಿಗೆ ಹಾವು ಕಚ್ಚಿತು. ಆ ಕ್ಷಣವೇ ಅವನು ಸತ್ತುಹೋದನು. ಈ ಸುದ್ದಿ ತಿಳಿದ ದಂಪತಿಗಳು ನಿಶ್ಚೇತ್ತರಾದರು, ಈ ಹಸಿವಿನಿಂದ ಸೊರಗುತ್ತಿದ್ದ ವೃದ್ಧನ ಕೂಗು ಬೇರೆ ಅಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಅವರಿಗೆ ಕ್ಷಣಕಾಲ ದಿಕ್ಕು ತೋರಲಿಲ್ಲ. ಮಗನ ಸಾವಿನ ಸಮಾಚಾರ ಹೊರಪಟ್ಟರೆ ವೃದ್ಧ ಭಕ್ತ ಊಟ ಮಾಡುವನೋ ಇಲ್ಲವೋ ಎಂಬ ಸಂದೇಹ ಬೇರೆ ಹುಟ್ಟಿತು. ಆದುದರಿಂದ ಆ ಸಮಾಚಾರ ಸ್ವಲ್ಪವೂ ಹೊರಬೀಳದಂತೆ ಎಚ್ಚರಿಕೆಯಿಂದಿದ್ದರು. ಇಳೆಯಾಂಡ ಗುಡಿಮಾರನು ತಾನೇ ಹೋಗಿ ಊಟದ ಎಲೆಗಳನ್ನು ತಂದನು.

ಅಡುಗೆ ಸಿದ್ಧವಾಯಿತು. ಇಳಿಯಾಂಡ ಗುಡಿಮಾರನು ವೃದ್ಧನ ಬಳಿಗೆ ಬಂದು ಕೈ ಮುಗಿದು ನಮಸ್ಕಾರ ಮಾಡಿದನು.

ವೃದ್ಧ ಭಕ್ತ : ಹಸಿವು ಬಹಳ ಇನ್ನು ತಡೆಯಲು ಸಾಧ್ಯವಿಲ್ಲ.

ಇಳೆಯಾಂಡ ಗುಡಿಮಾರ : ಅಡುಗೆ ಸಿದ್ಧವಾಗಿದೆ. ಭೋಜನಕ್ಕೆ ದಯಮಾಡಿಸಬೇಕು, ತಡವಾದುದಕ್ಕೆ ಕ್ಷಮಿಸಬೇಕು.

ವೃದ್ಧ : ಒಬ್ಬನೇ ಕುಳಿತು ಊಟ ಮಾಡುವುದು ನನಗೆ ಅಭ್ಯಾಸವಿಲ್ಲ, ನೀನೂ ನಿನ್ನ ಮಗನೂ ಸಹ ನನ್ನ ಪಂಕ್ತಿಗೆ ಬರಬೇಕು.

ಇಳೆಯಾಂಡ ಗುಡಿಮಾರನಿಗೆ ಏನು ಹೇಳಬೇಕೋ ಎಂಬುದು ತೋರಲಿಲ್ಲ. ಮೌನದಿಂದಿದ್ದನು.

ವೃದ್ಧಭಕ್ತ: "ಇನ್ನು ತಡವೇಕೆ ? ಜಾಗ್ರತೆ ಬನ್ನಿ." ಇಳೆಯಾಂಡ ಗುಡಿಮಾರನಿಗೆ ಚಿಂತೆಗಿಟ್ಟುಕೊಂಡಿತು. "ಮಗನು ಸತ್ತ ಸಮಾಚಾರವನ್ನು ಗುಟ್ಟಾಗಿಟ್ಟಿದ್ದಾಯಿತು. ಇನ್ನು, ಸತ್ತವನನ್ನು ಹೇಗೆ ಕರೆತರಲಿ ?... ಇನ್ನು ತಡಮಾಡಿದರೆ ಪ್ರಯೋಜನವಿಲ್ಲ. (ಧೈರ್ಯ ತಂದು ಕೊಂಡು), ಆದುದಾಗಲಿ ಇನ್ನು ಬೇಡಿ ನೋಡುತ್ತೇನೆ ಊಟ ಮಾಡದಿದ್ದರೆ ನನ್ನ ಪ್ರಾಣವನ್ನು ಒಪ್ಪಿಸಿ ಬಿಡುತ್ತೇನೆ." ಎಂದು ನಿಶ್ಚಯಿಸಿಕೊಂಡನು

ಏನಾಶ್ಚರ್ಯ! ನಿದ್ದೆಯಿಂದ ಎಚ್ಚತ್ತವನಂತೆ ತಮ್ಮ ಮಗನೇ ಎದ್ದು ಅಲ್ಲಿಗೆ ಬಂದನು! ಆ ದಂಪತಿಗಳ ಆನಂದ ಮೇರೆ ಮೀರಿತು.

ತಂದೆಯೂ ಮಗನೂ ಸಹ ಪಂಕ್ತಿಯಲ್ಲಿ ಕುಳಿತುಕೊಳ್ಳಲು ಸಿದ್ಧರಾಗಿ ಬಂದರು ಆದರೆ ವೃದ್ಧನು ಮಾಯವಾಗಿದ್ದನು. ಆ ಸ್ಥಳದಲ್ಲಿ ಸೂರ್ಯ ಕೋಟಿ ತೇಜಸ್ಸಿಗೆ ಮಿಗಿಲಾದ ಬೆಳಗಿನಿಂದ ಕೂಡಿದ ಪರಮೇಶ್ವರನು ಕಾಣಿಸಿಕೊಂಡನು.

ಇಳೆಯಾಂಡ ಗುಡಿಮಾರನೂ ಆತನ ಪತ್ನಿಯೂ ಮಗನೂ ಪರಮೇಶ್ವರನ ಪಾದಕ್ಕೆ ನಮಸ್ಕರಿಸಿದರು ಮನಸಾರೆ ಕೊಂಡಾಡಿದರು.

ಬಳಿಕ ಪುಷ್ಪಕ ವಿಮಾನದಲ್ಲಿ ಎಲ್ಲರೂ ಕೈಲಾಸಕ್ಕೆ ಹೊರಟರು. ಕೈಲಾಸದಲ್ಲಿ ಪರಮೇಶ್ವರನು ಅವರಿಗೆ ಗಣಪದವಿಯನ್ನು ಅನುಗ್ರಹಿಸಿದನು.

## ಎಲ್ಲ ಕಳಕೊಂಡು ಯೆಲ್ಲವನು ಪಡೆದ

ಶಿವನ ಶಯ್ಯೆ ಶ್ರೀ ಚೋಳದೇಶದಲಿ ಶರಣನಿದ್ದ ಯಿಳೆಯಾಂಡ
ಗುಡಿಮಾರನೆಂಬ ಬೇಸಾಯಗಾರ ಧನಧಾನ್ಯ ತುಳುಕಿ ಭಂಡಾರ;



ಹೆಚ್ಚುತಿರಲು ಸಂಪತ್ತುವುಕ್ಕಿತೋ ಶಿವನ ಭಕ್ತಿರಸ ಭಾಂಡ
ದೇವನಿತ್ತುದನು ದೇವಗರ್ಪಿಸಿದ! ತೃಪ್ತಿಜೀವನದ ಸಾರ!
ಜಂಗಮರಿಗೆ ಶಿವಶರಣರಿಂಗೆ ಸರ್ವಸ್ವಧಾರೆಯೆರೆದಿದು,
ದಾಸೋಹನಿಂದ ನೆಲೆಯೆನಿತು ಚಂದ! ಭಂಡಾರ ಬರಿದೊಬರಿದು!
ಭೂಮಿ ಹೋಯ್ತು, ಮನೆ ಬಿತ್ತು, ದೇಹವ್ರೋ ಜರೆಗೆಜರ್ಜರಿತವಂತು,
ಮಾನ ಮುಚ್ಚಲಿಕೆ ತುಂಡು ಚಿಂದಿ ಮಗ ಮಡದಿ ತನಗೆ ಗತಿ ಬಂತು

ಭಕ್ತಿಯೊಳವನ್ನುಯೀಕ್ಷಿಸಲ್ಕೆಮೇಣ್ ಮುಕ್ತಿ ನೀಡಲ್ಕೆ ತಾನು
ಬಂದನಹ ಜರಾವೃದ್ಧ ವೇಷದಲಿ ಶರಣಗುಡಿಗೆ ಶಿವನು!
ಮನೆಯೂ ಬರಿದು, ಮನ ಹಿರಿದೆಯಿಳೆ ಯಾಂಡನಾಯ್ದು ಮೊಳೆವಿತ್ತಿನಿಂದ
ಅಶನವುಣಿಸಿದನು ಶಿವನ ತಣಿಸಿದನು ತಾನೊ ನಿರಶನದೊಳಿರ್ದ!
ಹಾವುಕಚ್ಚಿ ಮಗ ಮಡಿದರೂ ಭವನ ಭಕ್ತಿ ಪಾರ್ಥಿಯೊಳೆ ಮಿಂದ!
ಎಲ್ಲಕಳಕೊಂಡು ಯೆಲ್ಲವನು ಪಡೆದ! ಶರಣ - ಶಿವಪಾದ ಸೇರ್ದ

— ಕಯ್ಯಾರ ಕಿಞ್ಞಣ್ಣ ರೈ

# 41 ನೆಯ ಸ್ವಾತಂತ್ರ್ಯ ದಿನಾಚರಣೆ ವರದಿ

ಹೆಚ್. ಬಿ. ಗಂಗಾಧರಯ್ಯ

ಆಗಸ್ಟ್-15 ಭಾರತದ ಇತಿಹಾಸದಲ್ಲಿ ಸ್ಮರಣೀಯವಾದುದು. ಶತ ಶತಮಾನಗಳ ಪರಕೀಯರ ಆಳ್ವಿಕೆಯಿಂದ ಭಾರತ ವಿಮೋಚನೆ ಹೊಂದಿ ಹೊಸ ದಿಗಂತದಲ್ಲಿ ರಾಷ್ಟ್ರ ಧ್ವಜವನ್ನು ಹಾರಿಸಿ ಜನಕೋಟಿ ನಲಿದಾಡಿದ ದಿನ. ಇದರ 41 ನೆಯ ವಾರ್ಷಿಕ ಸ್ವಾತಂತ್ರ್ಯೋತ್ಸವವನ್ನು ಶ್ರೀ ಮಠದ ಸನಿವಾಸ ಶಿಕ್ಷಣ ಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿಸಂಘದ ಆಶ್ರಯದಲ್ಲಿ ಆಚರಿಸಲಾಯಿತು.

ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಗಳವರ ಅಧ್ಯಕ್ಷತೆಯಲ್ಲಿ ತುಮಕೂರು ಕ್ಷೇತ್ರದ ಶಾಸಕರಾದ ಶ್ರೀ ಕೆ.ಎಂ. ಲಕ್ಷ್ಮೀನರಸಿಂಹಯ್ಯನವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಬೆಳಿಗ್ಗೆ 7-30 ಘಂಟೆಗೆ ಶ್ರೀ ಕೆ.ಎಂ. ಲಕ್ಷ್ಮೀನರಸಿಂಹಯ್ಯನವರು ಧ್ವಜಾರೋಹಣ ಮಾಡಿದರು. ಅನಂತರ 3,500 ವಿದ್ಯಾರ್ಥಿಗಳಿಂದ ಶಿಸ್ತಿನಿಂದ ಅಭೂತ ಪೂರ್ವ ಪಥಚಲನ 45 ನಿಮಿಷಗಳು ನಡೆದು ಅತಿಥಿಗಳಿಗೆ ವಂದನೆ ಸಲ್ಲಿಸಲಾಯಿತು. ಐದು ಶಿಕ್ಷಣ ಸಂಸ್ಥೆಗಳಿಂದ ವಿದ್ಯಾರ್ಥಿಗಳು ದೇಶ ಭಕ್ತಿಗೀತೆಗಳನ್ನು ಸಾಮೂಹಿಕವಾಗಿ ಹಾಡಿದರು.

ಸ್ವಾತಂತ್ರ್ಯ ಬಂದು 40 ವರ್ಷಕಳೆದರೂ ಆರ್ಥಿಕವಾಗಿ ದೇಶ ಹಿಂದೆ ಬಿದ್ದಿದೆ. ಅನೇಕ ಅಭಿವೃದ್ಧಿ ಕಾರ್ಯಗಳು ನಡೆದಿವೆ. ಜನಸಂಖ್ಯೆ ಅತಿಯಾಗಿ ಬೆಳೆಯುತ್ತಿರುವುದು ಒಂದು ಮುಖ್ಯ ಕಾರಣವಾಗಿದೆ. ಈ ಬಗ್ಗೆ ನಮ್ಮ ಜನತೆ ವಿವೇಕಶಾಲಿಗಳಾಗಿ ಯೋಚಿಸಬೇಕಾಗಿದೆ. ಶ್ರೀ ಮಠದಲ್ಲಿ ವಿದ್ಯಾರ್ಥಿಗಳಾದ ನೀವು ನಾಡಿನ ಎಲ್ಲಾ ಭಾಗಗಳಿಂದ ಬಂದಿದ್ದೀರಿ. ಶಿಸ್ತು ಮತ್ತು ಆದರ್ಶವಾದ ಗುಣಗಳನ್ನು ಮೈಗೂಡಿಸಿಕೊಂಡು ಉತ್ತಮ ಪ್ರಜೆಗಳಾಗಿ ದೇಶ ಸೇವೆಯಲ್ಲಿ ತೊಡಗಬೇಕು. ಈ ದಿಸೆಯಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಗಳವರ ಪವಿತ್ರವಾದ ಜೀವನ, ಮೌಲ್ಯಗಳು ನಿಮ್ಮನ್ನು ಪ್ರಭಾವಗೊಳಿಸುತ್ತವೆ. ಅವರ ಕಾರ್ಯದಲ್ಲಿ ಇತ್ತೀಚೆಗೆ ಎಷ್ಟೇ ಕಷ್ಟ ಕಾರ್ಪಣ್ಯಗಳು ಬಂದರೂ ತಮ್ಮ ಕಾರ್ಯವನ್ನು ನಿರಂತರವಾಗಿ ನಾಡಿನ ಅಭಿವೃದ್ಧಿಗಾಗಿ ಮುಂದುವರಿಸುತ್ತಾ ಬಂದಿದ್ದಾರೆ. ಇದು ಮಹಾತ್ಮರ ಮೇರು ಗುಣ. ಇಂದು ಯುವಕ ಜನಾಂಗದಲ್ಲಿ ದ್ವೇಷಾಸೂಯೆಗಳು ಅತಿಯಾಗಿ ದೇಶ ಅನೇಕ ಸಮಸ್ಯೆಗಳನ್ನು ಎದುರಿಸಿ ಮುನ್ನಡೆಯಬೇಕಾಗಿದೆ. ಈ ಪವಿತ್ರ ಶ್ರೀ ಮಠದ ಧೂಳಿನಲ್ಲಿ ಬೆಳೆದು ಶ್ರೀ ಶ್ರೀ ಗಳವರ ಆಶೀರ್ವಚನ ಪಡೆದು ಅವರ ಮಾರ್ಗದರ್ಶನದಲ್ಲಿ ಉದಾತ್ತ ಭಾವನೆಗಳ ಚಿಂತನೆ ಮಾಡಬೇಕೆಂದು ಶ್ರೀ ಲಕ್ಷ್ಮೀನರಸಿಂಹಯ್ಯನವರು ನುಡಿದರು.



ಶ್ರೀ ಶ್ರೀ ಗಳವರು ಆಶೀರ್ವಚನ ನೀಡಿ ವಿದ್ಯಾರ್ಥಿಗಳನ್ನು ಕುರಿತು ನೀವುಗಳೆಲ್ಲರೂ ಸ್ವತಂತ್ರ ಭಾರತದಲ್ಲಿ ಹುಟ್ಟಿಬಾಳಿ ಬೆಳಗುತ್ತಿರುವುದು ಪುಣ್ಯವೆಂದು ಭಾವಿಸಬೇಕು. ಸ್ವಾತಂತ್ರ್ಯ ಪೂರ್ವದಲ್ಲಿ ಜನತೆ ಮತ್ತು ದೇಶದ ಪರಿಸ್ಥಿತಿಯ ಅರಿವು ನಿಮಗಿಲ್ಲ.

ಅಲ್ಪಸಂಖ್ಯಾತರಾದ ಬ್ರಿಟಿಷರು ಆಳುತ್ತಿದ್ದರು. ನಮ್ಮ ಭಾರತೀಯರ ಸಂಖ್ಯೆ 35 ಕೋಟಿ. ಆದರೆ ಐಕಮತ್ಯವಿಲ್ಲದೆ ಒಗ್ಗಟ್ಟು ಇಲ್ಲದ ಕಾರಣ ಇವರು ನಮ್ಮ ಅಸಂಖ್ಯಾತ ಜನತೆಯ ಮೇಲೆ ಪ್ರಭುತ್ವ ಸಾಧಿಸಿದರು. ಆತ್ಮ ಗೌರವ ಇಲ್ಲದೆ ಗುಲಾಮರಾಗಿ ನಮ್ಮ ಪೂರ್ವಿಕರು ಬಾಳು ಸಾಗಿಸುತ್ತಿದ್ದರು. ಮಹತ್ತರ ಆಕಾಂಕ್ಷೆ ಹೊಂದಿ ಕೆಲವು ನಾಯಕರು, ಬ್ರಿಟಿಷರು ದೇಶದಿಂದ ಕಾಲ್ತೆಗೆಯಲು ಸಂಧಾನ ನಡೆಸಿದರು. ಫಲವಾಗಲಿಲ್ಲ. ಹೋರಾಟ ಅನಿವಾರ್ಯವಾಯಿತು. ಗಾಂಧೀಜಿಯವರು ಮುಖಂಡತ್ವ ವಹಿಸಿಕೊಂಡರು. ಜನತೆಯಲ್ಲಿ ಆತ್ಮವಿಶ್ವಾಸ ಮೂಡಿಬಂತು. ಭಾರತದ ಸಂಸ್ಕೃತಿ ಪರಂಪರೆಯ ಜೀವನಾಡಿಯನ್ನು ಅವರು ಅರಿತಿದ್ದರು. ಅವರ ಅಹಿಂಸಾ ಮಾರ್ಗದಲ್ಲಿ ಬ್ರಿಟಿಷರು ಬೇರೆ ಮಾರ್ಗವಿಲ್ಲದೆ ಸ್ವಯಂ ಪ್ರೇರಿತರಾಗಿ ತಮ್ಮ ಆಳ್ವಿಕೆಯನ್ನು ಅಂತ್ಯಗೊಳಿಸಿದರು.

**Man is a rational animal** ಈ ಭೌತಿಕ ದೇಹದಿಂದ ಆಧ್ಯಾತ್ಮಿಕತೆ ಪಡೆದು ಪರಿಪೂರ್ಣ ಮಾನವನಾಗಬೇಕು. ಎಲ್ಲರಿಗೂ ಸಮಾನವಾದ ಜೀವನ ಸೌಕರ್ಯಗಳನ್ನು ಒದಗಿಸುವುದು ಸರ್ಕಾರದ ಕರ್ತವ್ಯ. ನಾಲ್ಕು ದಶಕಗಳು ಕಳೆದರೂ ಈ ಗುರಿ ಎಲ್ಲರಿಗೂ ಆಶಾದಾಯಕವಾಗಿಲ್ಲ. ಬಡತನ, ಅನಕ್ಷರತೆ ಇಂದು ಹೆಮ್ಮರವಾಗಿ ಬೆಳೆದು ನಿಂತಿವೆ. ಇಂಥ ಮಹತ್ತರವಾದ ಐತಿಹಾಸಿಕ ಸ್ವಾತಂತ್ರ್ಯ ದಿನದಂದು ನಾವುಗಳೆಲ್ಲರೂ ಒಟ್ಟಾಗಿ ಪ್ರತಿಜ್ಞೆ ಸ್ವೀಕರಿಸಿ ದೇಶವನ್ನು ಭವ್ಯವಾಗಿ ಕಟ್ಟಲು ಪ್ರಯತ್ನ ಮಾಡಬೇಕು.

**Freedom of india has got great significance. Every one must become a true Indian. Each man is great in his own place.**

ವಿದ್ಯಾರ್ಥಿಗಳು, ಕಾರ್ಮಿಕರು, ಅಧಿಕಾರಿಗಳು, ರೈತರು ಮತ್ತು ನಾಯಕರುಗಳು ಶ್ರದ್ಧೆ ಮತ್ತು ನಿಷ್ಠೆಯಿಂದ ತಮ್ಮ ಪಾಲಿನ ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ಮಾಡುವ ಮನೋಭಾವವಿರಬೇಕು. ಗಾಂಧೀಜಿ ಅವರು ಆತ್ಮೀಯ ಸಂಪತ್ತಿನಿಂದ ಸ್ವಾತಂತ್ರ್ಯಗಳಿಸಿ ಕೊಟ್ಟು ಮಹಾತ್ಮರಾಗಿ ಅಮರರಾದರು. ಇಂದು ವ್ಯಕ್ತಿಗಳ ನಡುವೆ ದೇಶದೇಶಗಳ ನಡುವೆ ಅಧಿಕಾರದಾಹ, ಆಕ್ರಮಣದಾಹ, ಸಂಪತ್ತು ದಾಹ ನಡೆಯುತ್ತಿವೆ. ಸೇವೆಗೋಸ್ಕರ ಅಧಿಕಾರವಲ್ಲ. ವ್ಯಕ್ತಿ ತಾನು ಮಾಡಿದ ಕೃತ್ಯಗಳನ್ನು ಮುಚ್ಚಿ ಭೋಗ ಜೀವನ ನಡೆಸಲು ಸಂಚು.

ವಿದ್ಯಾರ್ಥಿಗಳಾದ ನೀವು ಆದರ್ಶ ವ್ಯಕ್ತಿತ್ವರೂಪಿಸಿಕೊಂಡು ಸ್ವಯಂ ಸಾಧನೆ-ಯಿಂದ ನಿಮ್ಮ ಭವಿಷ್ಯ ಮತ್ತು ಬಾಳನ್ನು ಹಸನು ಮಾಡಿಕೊಳ್ಳಬೇಕು. ಉಜ್ವಲ ರಾಷ್ಟ್ರ ಪ್ರೇಮ ಮತ್ತು ಭಕ್ತಿಯಿಂದ ಕಾರ್ಯ ಪ್ರವೃತ್ತರಾಗುತ್ತೇವೆಂದು ಸಂಕಲ್ಪ ಮಾಡಬೇಕು.

ಮಧ್ಯಾಹ್ನ 4 ಗಂಟೆಯಿಂದ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗಳ ನಿರ್ದೇಶಕರೂ, ಶ್ರೀ ಸಿದ್ಧಗಂಗಾ ಮಹಾ ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀ **ಎಂ. ವಿ. ಸಿದ್ಧ-ಲಿಂಗಮೂರ್ತಿಯವರ** ನೇತೃತ್ವದಲ್ಲಿ ಐದು ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಮತ್ತು ಮನರಂಜನಾ ಕಾರ್ಯಗಳು ನಡೆದವು.

ಕಾರ್ಯಕ್ರಮಗಳು ಆಕರ್ಷಣೀಯವಾಗಿದ್ದು ಸ್ವಾತಂತ್ರ್ಯ ದಿನದ ಮಹತ್ವವನ್ನು ನಿರೂಪಿಸಿದ್ದವು. ಅಕ್ಕಪಕ್ಕದ ಗ್ರಾಮಗಳಿಂದ ಸಹ ಸ್ವಾರು ಜನರು ಈ ಕಾರ್ಯ-ಕ್ರಮದಲ್ಲಿ ಭಾಗಿಗಳಾಗಿ ತಮ್ಮ ಸಂತೋಷ ಮತ್ತು ಮೆಚ್ಚುಗೆಯನ್ನು ವ್ಯಕ್ತ ಪಡಿಸಿದರು.

ಇದರ ಅಂಗವಾಗಿ ಪರಮ ಪೂಜ್ಯ ಶ್ರೀ ಶ್ರೀ ಗಳವರು ಶ್ರೀ ಮಠದ ಎಲ್ಲ ವಿದ್ಯಾರ್ಥಿ ಸಮುದಾಯಕ್ಕೆ ಶಿಕ್ಷಕ ವರ್ಗಕ್ಕೆ ಮತ್ತು ಭಕ್ತಾದಿಗಳಿಗೆ ವಿಶೇಷವಾದ ಸಿಹಿ ಊಟದ ವ್ಯವಸ್ಥೆ ಮಾಡಿದ್ದರು.





ಶಿಕ್ಷಣ ತಜ್ಞೆ

# ಡಾ|| ಮೇಡಂ ಮೇರಿ ಮಾಂಟೆಸೋರಿ

ಶ್ರೀ ಹೆಚ್. ಮಹಾಲಿಂಗಪ್ಪ ಎಂ.ಎ.,ಬಿ.ಇಡಿ.
ಅಧ್ಯಾಪಕರು, ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು.

ಮೇರಿ ಮಾಂಟೆಸೋರಿಯವರು 1870 ರಲ್ಲಿ ರೋಮ್ ದೇಶದಲ್ಲಿ ಜನಿಸಿದರು. ಇವರು ಚಿಕ್ಕಂದಿನಿಂದಲೇ ಉತ್ತಮ ಶಿಕ್ಷಣ ಪಡೆದಿದ್ದರು. ಈಕೆ ವೈದ್ಯಕೀಯ ಶಿಕ್ಷಣ ವನ್ನು ಪಡೆದ ಪ್ರತಿಭಾವಂತೆ. ರೋಮ್ ವಿಶ್ವವಿದ್ಯಾನಿಲಯದ ವೈದ್ಯ ಶಾಸ್ತ್ರದ ಪದವಿ ಯನ್ನು ಪಡೆದ ಪ್ರಪ್ರಥಮ ಮಹಿಳೆ.

ಸ್ತ್ರೀ ಸಹಜ ಸ್ವಭಾವದಂತೆ ಈಕೆಗೆ ಚಿಕ್ಕಮಕ್ಕಳೆಂದರೆ ತುಂಬಾ ಪ್ರೀತಿ. ವೈದ್ಯ ವೃತ್ತಿಯು ಇವರಿಗೆ ಅಷ್ಟು ಮಾನಸಿಕ ತೃಪ್ತಿ ಮತ್ತು ಸಮಾಧಾನವನ್ನು ತರಲಿಲ್ಲ. ಆದ್ದರಿಂದ ವೈದ್ಯಕೀಯ ಜೀವನ ತೊರೆದು ದುರ್ಬಲ ಮನಸ್ಸಿನ ಬಾಲಕರ ಬಗ್ಗೆ ಅಭ್ಯಾಸ ಮಾಡುವ ಆಸಕ್ತಿ ಬೆಳಸಿಕೊಂಡಿದ್ದರು. ಅದೇ ವೇಳೆಯಲ್ಲಿ ದುರ್ಬಲ ಮನಸ್ಸಿನ ಬಾಲಕರಿಗೆ ಶಿಕ್ಷಣ ನೀಡುವ ಜವಾಬ್ದಾರಿಹೊತ್ತ "ಗುಡ್ ಬಿಲ್ಡಿಂಗ್" ಎಂಬ ಸಂಸ್ಥೆ ರೋಂನಲ್ಲಿ ಸ್ಥಾಪಿತವಾಯಿತು. ರೋಂನಲ್ಲಿಯ ಬಡವರನ್ನೆಲ್ಲಾ ಕಲೆ ಹಾಕಿ ಅವರ ದಾರಿದ್ರ ನಿವಾರಣೆಗೆ ಕೈಲಾದ ಸೇವೆ ಸಲ್ಲಿಸುವುದೇ ಇದರ ಧ್ಯೇಯವಾಗಿತ್ತು. 3ರಿಂದ 6 ವರ್ಷದ ಬಡ ಮಕ್ಕಳ ಶಿಕ್ಷಣ ವ್ಯವಸ್ಥೆಗೆ **"ದಿ ಹೌಸ್ ಆಫ್ ಚೈಲ್ಡ್ ಹುಡ್" (ಮಕ್ಕಳ ಗೃಹ)** ಎಂಬ ಶಾಲೆಯನ್ನೂ ಇವರು ತೆರೆದರು, ಈ ಶಾಲೆಗೆ ಸೇರಿದ ಮಾನಸಿಕ ದುರ್ಬಲ ಮಕ್ಕಳಿಗೆ ಶಿಕ್ಷಣ ನೀಡುವ ಅವಕಾಶವನ್ನು ಮಾಂಟೆಸೋರಿಗೆ ನೀಡಿದರು. ತಮ್ಮ ಮನದಾಸೆಗೆ ಸರಿಹೊಂದುವ ಅವಕಾಶ ಸಿಕ್ಕಿದುದಕ್ಕೆ ಇವರಿಗೆ ಬಹಳ ಸಂತೋಷವೇ ಆಯಿತು. ಈ ಸಂದರ್ಭದಲ್ಲಿ ಮಕ್ಕಳ ಸುಧಾರಣೆಗೆ ಸಂಬಂಧಿಸಿದಂತೆ ಅನೇಕ ಪ್ರಯೋಗಗಳನ್ನು ಮಾಡಿದರು, ತಮ್ಮದೇ ಆದ ಶೈಕ್ಷಣಿಕ ಚಿಂತನೆ ಹಾಗೂ ಬೋಧನಾ ವಿಧಾನಗಳನ್ನು ಕಂಡುಕೊಂಡರು. ಮುಂದೆ ಇವು ಯೂರೋಪ್ ಖಂಡದಲ್ಲೆಲ್ಲಾ ಪ್ರಚಲಿತವಾಗಿ ಅಪಾರ ಜನಪ್ರಿಯತೆಯನ್ನು ಇವರಿಗೆ ತಂದವು.

1894 ರೋಮ್ ವಿಶ್ವವಿದ್ಯಾನಿಲಯಕ್ಕೆ ಸೇರಿದ **ಮನಶ್ಶಾಸ್ತ್ರೀಯ ವೈದ್ಯಶಾಲೆ (Psychiatric clinic)** ಯಲ್ಲೂ ತಮ್ಮ ಸೇವೆ ಸಲ್ಲಿಸಿದರು. ಇಲ್ಲಿ ದುರ್ಬಲ ಮಕ್ಕಳ ಸುಧಾರಣೆ ಮಾಡುವ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದರು. ಇವರ ಅನುಭವದ ಪ್ರಕಾರ "ಮಕ್ಕಳ ಮಾನಸಿಕ ದುರ್ಬಲತೆಗೆ ಅವರಲ್ಲಿನ ಇಂದ್ರಿಯಗಳ

ದಕ್ಷ ಕಾರ್ಯ ನಿರ್ವಹಣೆ ಆದ್ದರಿಂದ ಮಕ್ಕಳ ಇಂದ್ರಿಯಗಳ ದಕ್ಷ ಕಾರ್ಯ ನಿರ್ವಹಣೆಗೆ ಅವಶ್ಯವಾದ ತರಬೇತಿ ಮತ್ತು ವ್ಯಾಯಾಮ ಚಟುವಟಿಕೆಗಳನ್ನು ಇದರಿಂದ ಇಂತಹ ಮಕ್ಕಳ ಕಲಿಕೆಯಲ್ಲಿ ಅಗಾಧವಾದ ಸುಧಾರಣೆ ಕಂಡು ಬಂತು. ಇಂತಹ ತರಬೇತಿಯಿಂದ ಕೆಲವು ದುರ್ಬಲ ಮನಸ್ಸಿನ ಮಕ್ಕಳ ಕಲಿಕೆಯು ಸಾಧಾರಣ ಮಕ್ಕಳ ಕಲಿಕೆಗಿಂತ ಉತ್ತಮವಾಯಿತು. ಈ ವಿಧಾನವೇ ಮುಂದೆ ಬಹು ಜನಪ್ರಿಯ ವಾದ "ಮಾಂಟೇಸೋರಿ ಪದ್ಧತಿ" ಯೆಂದು ಪ್ರಖ್ಯಾತಿ ಗಳಿಸಿತು.

ಇವರು 1922ರಲ್ಲಿ ಶಿಶು ವಿಹಾರಗಳ (Intant School) ತನಿಖಾಧಿಕಾರಿ ಗಳಾಗಿ ನೇಮಕಗೊಂಡು ಉತ್ತಮ ಸೇವೆ ಸಲ್ಲಿಸಿದರು. ಮಕ್ಕಳಿಗೆ ತನ್ನದೇ ಆದ ವಿಶೇಷ ವಿಧಾನದಲ್ಲಿ ಶಿಕ್ಷಣ ನೀಡಿದರು. ಈ ಮಾಂಟೇಸೋರಿಯು ವಿಧಾನದಲ್ಲಿ ಶಿಕ್ಷಕ ತರಬೇತಿ ನೀಡುವ ಕಾರ್ಯವನ್ನೂ ಮಾಡಿದರು.

ಮುಂದೆ ಇಟಲಿ ದೇಶದಲ್ಲಿ ಮುಸಲೋನಿ ಅಧಿಕಾರಕ್ಕೆ ಬಂದನು. ಇವನ ವಿರೋಧದಿಂದ ಮಾಂಟಿಸೋರಿಯು ಸ್ಪೈನ್ ದೇಶಕ್ಕೆ ಹೋಗಬೇಕಾಯಿತು ಮಾಂಟಿಸೋರಿಯ ಶಿಕ್ಷಣ ವಿಧಾನ, ವ್ಯಕ್ತಿತ್ವದ ಬೆಳವಣಿಗೆಗೆ ಹಾಗೂ ಸುಧಾರಣೆಗೆ ಬದ್ಧವಾಗಿತ್ತು. ಆದರೆ ಮುಸಲೋನಿಗೆ ಬೇಕಾಗಿದ್ದುದು ಯುದ್ಧ ಮಾಡುವ ಮನೋ-ಭಾವವುಳ್ಳ ವ್ಯಕ್ತಿತ್ವದ ನಿರ್ಮಾಣ. ಈ ಅಭಿಪ್ರಾಯ ಭೇದದಿಂದ ಈಕೆಯು ಇಟಲಿ ಬಿಟ್ಟು ಸ್ಪೈನ್ ದೇಶಕ್ಕೆ ಹೋಗಬೇಕಾಯಿತು. ಅನಂತರ ಸ್ಪೈನ್ ದೇಶದಲ್ಲೂ ಫಾಸಿಸ್ಟ್ ಸರ್ಕಾರ ಆಡಳಿತಕ್ಕೆ ಬಂದಾಗ ಸ್ಪೈನ್ ದೇಶವನ್ನು ಬಿಟ್ಟು 1939 ರಲ್ಲಿ ಭಾರತಕ್ಕ ಬಂದರು. ಇಲ್ಲಿ 1951 ರವರೆಗೂ ಇದ್ದು 1952ರಲ್ಲಿ ಹಾಲೆಂಡ್ ದೇಶಕ್ಕ ಮರಳಿದರು, ಅಲ್ಲಿಯೆ ತನ್ನ ಕೊನೆಯುಸಿರೆಳೆದು ಇಹ ಜೀವನದ ವ್ಯಾಪಾರದಿಂದ ಮುಕ್ತರಾದರು.

ಮೇಡಮ್ ಮೇರಿ ಮಾಂಟಿಸೋರಿಯವರು ಜಗತ್ತಿನ ಅಗ್ರಗಣ್ಯ ಶಿಕ್ಷಣ ತಜ್ಞ ರಲ್ಲಿ ಒಬ್ಬರೆನಿಸಿ ಪ್ರಖ್ಯಾತರಾಗಿದ್ದರು. ಶೀಘ್ರ ಶಿಕ್ಷಣಸುಧಾರಕಿಯೆಂದೇ ಖ್ಯಾತಿ ಪಡೆದರು. ಇವರು ತಮ್ಮ ಜೀವನಾನುಭವದಿಂದ ಅನೇಕ ಉತ್ತಮ ಗ್ರಂಥಗಳನ್ನು ರಚಿಸಿದರು, ಅವರು ಬರೆದ ಕೆಲವು ಹೆಸರಾಂತ ಪುಸ್ತಕಗಳು ಈ ಕೆಳಕಂಡಂತಿವೆ.

1 The Discovery of the child (ಮಗುವಿನ ಅನ್ವೇಷಣೆ)
2 The secret of child hood (ಶೈಶವಾವಸ್ಥೆಯ ರಹಸ್ಯಗಳು)
3 What you should know about your child (ನಿಮ್ಮ ಮಗುವಿನ ಬಗ್ಗೆ ನೀವೇನು ತಿಳಿದಿರಬೇಕು ?)
4 The Montessori methcd (ಮಾಂಟಿಸೋರಿ ವಿಧಾನ)
5 The child. Peace and Education (ಮಗು, ಶಾಂತಿ, ಮತ್ತು ಶಿಕ್ಷಣ)





ಇವರ ಚಟುವಟಿಕೆ ಹಾಗೂ ಕೃತಿಗಳಿಂದ ಮೂಡಿಬಂದ ಅನೇಕ ಶೈಕ್ಷಣಿಕ ವಿಚಾರಗಳನ್ನು ಈ ಮುಂದೆ ತಿಳಿಯಬಹುದಾಗಿದೆ.

**ಶಿಕ್ಷಣದ ಅರ್ಥ:—**

"Education is the active help, given to the normal EXpansion of the life of the child"

"ಮಗುವಿನ ಜೀವನದ ಸಾಮಾನ್ಯ ವಿಕಾಸಕ್ಕೆ ನೀಡುವ ಚೈತನ್ಯಾತ್ಮಕ ಸಹಾಯವೇ ಶಿಕ್ಷಣ"

ಅಂದರೆ ಶಿಕ್ಷಣ ಕ್ರಮವು ಒಂದ ಚೈತನ್ಯಾತ್ಮಕ ಸಹಾಯ. ಇದರಿಂದ ಮಗು ವಿನ ಜೀವನದ ಸಾಮಾನ್ಯ ವಿಕಾಸ ಬೆಳವಣಿಗೆ ಹಾಗೂ ಅಭಿವೃದ್ಧಿ ಆಗಬೇಕು. ಇಂತಹ ಚೈತನ್ಯಾತ್ಮಕ ಸಹಾಯ ನೀಡುವ, ಸೂಕ್ತ ವಾತಾವರಣವನ್ನು ಮಗು ವಿಗೆ ರೂಪಿಸುವ ಕ್ರಮವೇ ಶಿಕ್ಷಣ.

"To make inner, outer' is the main Function of Education' and Education means development from within"

"ಮಗುವಿನಲ್ಲಿ ಆಂತರಿಕವಾಗಿ ಅಡಗಿರುವುದನ್ನು ಬಹಿರಂಗಕ್ಕೆ ಬರುವಂತೆ ಮಾಡುವುದು ಶಿಕ್ಷಣದ ಕರ್ತವ್ಯ. ಮತ್ತು ಶಿಕ್ಷಣವೆಂದರೆ ಅಂತಃ ಪ್ರೇರಣೆಯಿಂದಾದ ಅಭಿವೃದ್ಧಿ ಅಥವಾ ಬೆಳವಣಿಗೆ"

ಅಂದರೆ ಮಗುವಿನಲ್ಲಿ ಹುಟ್ಟಿನಿಂದ ಬಂದ ಆಂತರಿಕ ಶಕ್ತಿ ಸಾಮರ್ಥ್ಯಗಳು ವಿಕಾಸ ಹೊಂದಿ ಅವನ ಜೀವನದಲ್ಲಿ ಅಭಿವ್ಯಕ್ತಗೊಂಡು ಸಾರ್ಥಕವಾಗುವಂತೆ ಮಾಡು ವುದೇ ಶಿಕ್ಷಣ. ಮಗುವಿನ ಅಭಿವೃದ್ಧಿ ಅವನ ಸಹಜ ಸ್ವಭಾವಕ್ಕೆ ಅನುಗುಣ ವಾಗಿ ಅಂತಃ ಪ್ರೇರಣೆಯಿಂದ ಮೂಡಿ ಬರುವಂತೆ ಶಿಕ್ಷಣ ವ್ಯವಸ್ಥೆ ಗೊಳ್ಳಬೇಕು ಎಂದರ್ಥ.

## ಶೈಕ್ಷಣಿಕ ಗುರಿಗಳು:—

### 1 ವೈಯಕ್ತಿವಾದ ವ್ಯಕ್ತಿತ್ವ ನಿರ್ಮಾಣದ ಗುರಿ.

ಮಗುವು ತನ್ನದೇ ಆದ ಸಹಜ ಧರ್ಮಕ್ಕೆ ಅನುಗುಣವಾದ ತನ್ನ ವಿಶೇಷ ಶಕ್ತಿ ಸಾಮರ್ಥ್ಯಕ್ಕೆ ಅನುಗುಣವಾದ, ಇತರರಿಂದ ಭಿನ್ನವಾಗಿರಲು ಬಹುದಾದ, ವ್ಯಕ್ತಿತ್ವ ಬೆಳವಣಿಗೆಯ ಗುರಿಯನ್ನು ಶಿಕ್ಷಣ ಹೊಂದಿರಬೇಕು. ಅಂದರೆ ವ್ಯಕ್ತಿ ವಿಶೇಷಣಗಳಿಗೆ ಸಾಕಷ್ಟು ಮಾನ್ಯತೆ ಹಾಗೂ ಗೌರವ ನೀಡಿ ವೈಯುಕ್ತಿಕ ಗಮನ ನೀಡಿ ಅವನ ವಿಶೇಷತೆಗಳಿಗೆ ಅನುಗುಣವಾದ ಬೆಳವಣಿಗೆಗೆ ಶಿಕ್ಷಣ ಶ್ರಮಿಸ ಬೇಕು ಇದು ಶಿಕ್ಷಣದ ಗುರಿಯಾಗಬೇಕು. ಸಾಮೂಹಿಕ ಶಿಕ್ಷಣದ ವ್ಯವಸ್ಥೆಯಲ್ಲಿ ವ ಷ್ಟು ವಿನ ವ್ಯಕ್ತಿತ್ವ ವಿಶೇಷಣಗಳು ಹಾಳಾಗದಂತೆ ಲಕ್ಷ್ಯವಹಿಸುವುದು ನಮ್ಮ ಆದ್ಯ ಕರ್ತವ್ಯವಾಗಬೇಕು.

### 2 ಅಂತ:—ಪ್ರೇರಣೆ ಯಿಂದಾಗುವ ಬೆಳವಣಿಗೆಯ ಗುರಿ.

ಒತ್ತಾಯ ಪೂರ್ವಕವಾಗಿ ಆಗಲಿ ಬಾಹ್ಯ ಒತ್ತಡಗಳಿಂದ ಆಗಲಿ ಮಗುವಿನ ಬೆಳವಣಿಗೆಯ ಮೇಲೆ ಏನನ್ನು ಹೇರಬಾರದು. ಮಗುವಿನಲ್ಲಿ ಅಡಗಿರುವ ಪ್ರತಿಭೆ, ಶಕ್ತಿ ಸಾಮರ್ಥ್ಯಗಳ ಸಹಜ ವಿಕಾಸಕ್ಕೆ ಸ್ವಯಂ ಆಸರೆಗಳಿಂದ ಪ್ರೇರಣೆ ಹೊಂದಿದ ಬೆಳವಣಿಗೆಗೆ ಶಿಕ್ಷಣ ಬದ್ಧವಾಗಿರಬೇಕು. ಇದಕ್ಕೆ ಅವಶ್ಯವಾದ ಉತ್ತಮ ಪರಿಸರ ನೀಡುವ ಗುರಿಯನ್ನು ಶಿಕ್ಷಣ ಹೊಂದಿರಬೇಕು.

### 3 ಸ್ವಯಂ ಶಿಕ್ಷಣದ ಗುರಿ (Auto Education)

ಸ್ವಂತ ಪ್ರಯತ್ನಗಳಿಂದ ಮಗುವು ಕಲಿಯುವಂತೆ ಮಾಡುವ ಗುರಿಯನ್ನು ಶಿಕ್ಷಣ ಹೊಂದಿರಬೇಕು. ಕಲಿಕೆಯ ಕ್ರಮದಲ್ಲಿ ಮಗುವು ಸಹಾಯ ಅಪೇಕ್ಷಿಸಿದಾಗ ಮಾತ್ರ, ಶಿಕ್ಷಕರು ಸಹಾಯವನ್ನು ಎಷ್ಟು ಬೇಕೋ ಅಷ್ಟನ್ನು ಮಾತ್ರ ನೀಡಬೇಕು ಉಳಿದದ್ದನ್ನು ಮಗುವು ತಾನಾಗಿಯೇ ಕಲಿಯಬೇಕು. ಕೈ ತುತ್ತು ಉಣಿಸುವ ಕ್ರಮಕ್ಕೆ ಆಸ್ಪದ ವಿರಬಾರದು ಸ್ವಂತ ಕಲಿಕೆಗೆ ಸಹಾಯವಾಗುವ ಹೆಸರಾಂತ ಡೈಡಾ ಕ್ಟಿಕ್ ಉಪಕರಣಗಳನ್ನು ಮಾಟಿಸೋರಿ ಕಂಡುಹಿಡಿದಿದ್ದರು.

### 4 ಸ್ವಯಂ ಶಿಸ್ತು ಮೂಡಿಸುವ ಗುರಿ:-

ಮಗುವಿನಲ್ಲಿ ಸಯಂ ಶಿಸ್ತು ಮೂಡಿಸುವ ಗುರಿಯನ್ನು ಶಿಕ್ಷಣ ಹೊಂದಿರಬೇಕು ಮಕ್ಕಳ ಮೇಲೆ ಶಿಸ್ತನ್ನು ಒತ್ತಾಯ ಪೂರಕವಾಗಿ ಹೇರುವುದು ಉಚಿತವಲ್ಲ. ಬಹುಮಾನ ಅಥವಾ ಶಿಕ್ಷೆಗಳು ಅಷ್ಟು ಸಹಾಯ ಮಾಡಲಾರವು ಶಿಸ್ತಿನ ಗುಣದ ಬೆಲೆ



ಹಾಗೂ ಮೌಲ್ಯವನ್ನು ಮಕ್ಕಳಿಗೆ ಅರಿವಾಗುವಂತೆ ಮಾಡುವ ಚಟುವಟಿಕೆ ನೀಡಿ ಸ್ವಯಂಶಿಸ್ತನು ಮಕ್ಕಳಲ್ಲಿ ಬೆಳೆಸುವುದು ಉತ್ತಮ. ಇದಕ್ಕೆ ಶಿಕ್ಷಣ ಬದ್ಧವಾಗಿರಬೇಕು.

### 5 ಮಗುವಿಗೆ ಸ್ವಾತಂತ್ರ ನೀಡುವ ಗುರಿ :-

ಮಕ್ಕಳಿಗೆ ತನ್ನ ವಿಚಾರವಂತಿಕೆ ಹಾಗೂ ಅಭಿವ್ಯಕ್ತತೆಗೆ ಪೂರ್ಣ ಸ್ವಾತಂತ್ರ್ಯವನ್ನು ಶಿಕ್ಷಣ ನೀಡಬೇಕು. ಶಿಕ್ಷಕನು ತನ್ನ ಆಚಾರ ವಿಚಾರಗಳನ್ನು ಮಕ್ಕಳ ಮೇಲೆ ಒತ್ತಾಯವಾಗಿ ಹೇರಬಾರದು. ಮಕ್ಕಳ ಸ್ವಾತಂತ್ರ್ಯವನ್ನು ಶಿಕ್ಷಕರು ಹರಣ ಮಾಡಬಾರದು.

ಮಕ್ಕಳಿಗೆ ನೀಡುವ ಸ್ವಾತಂತ್ರ್ಯವು ಸ್ವಯಂ ನಿರ್ವಹಣೆಗೆ ದಾರಿದೀಪವಾಗಬೇಕು ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಇತರರ ಮೇಲೆ ಪರಾವಲಂಬಿಯಾಗದೆ, ಸ್ವತಂತ್ರ್ಯ ನಿರ್ವಹಣೆಗೆ ಅನುಕೂಲವಾದ ತರಬೇತಿ ಹಾಗೂ ಶಕ್ತಿ ಸಾಮರ್ಥ್ಯಗಳ ಬೆಳವಣಿಗೆಯನ್ನು ಶಿಕ್ಷಣ ಮಾಡಬೇಕು. ಇದಕ್ಕೆ ಪೂರಕವಾದ ವಿಧಿವಿಧಾನಗಳನ್ನು ಮಾಂಟೆಸೋರಿ ವಿಧಾನದಲ್ಲಿ ಯೋಜಿಸಲಾಗಿದೆ

### ಮಗುವಿನ ಪ್ರಕೃತಿ ಸ್ವಭಾವಕ್ಕನುಗುಣವಾಗಿ ಶಿಕ್ಷಣ ನೀಡುವ ಗುರಿ :-

ಮಗುವಿನ ಮನಶ್ಶಾಸ್ತ್ರವನ್ನು ಗಮನದಲ್ಲಿಟ್ಟು ರೂಪಿಸುವ ಶಿಕ್ಷಣ ಅವಶ್ಯ. ಮಗುವಿನ ಅವಶ್ಯಕತೆ ಆಸಕ್ತಿ ಹಾಗೂ ಶಕ್ತಿಸಾಮರ್ಥ್ಯಗಳನ್ನು ಗಣನೆಯಲ್ಲಿಟ್ಟುಕೊಂಡು ಶಿಕ್ಷಣ ಕ್ರಿಯೆ ರೂಪಿಸಬೇಕು. ಮಕ್ಕಳ ಕ್ರಿಯಾತ್ಮಕ ಸಹಕಾರವನ್ನು ಶಿಕ್ಷಕರು ಕಲಿಕೆಯ ಕ್ರಮದಲ್ಲಿ ಅಳವಡಿಸಿಕೊಳ್ಳುವುದು ಅವಶ್ಯ.

(ಮುಂದುವರೆಯುತ್ತದೆ)

ಹುತ್ತವ ಬಡಿದೊಡೆ ಹಾವು ಸಾಯಬಲ್ಲದೆ ಅಯ್ಯಾ
ಅಘೋರ ತಪವ ಮಾಡಿದಡೇನು ಅಂತರಂಗ ಶುದ್ಧಿ ಇಲ್ಲದವರ
ಎಂತು ನಂಬುವನಯ್ಯ ಕೂಡಲಸಂಗಮದೇವ.

ಶ್ರೀ ಬಸವಣ್ಣನವರು.

( ಮುಂದುವರಿದ ಲೇಖನ )

# ಶ್ರೀ ಬಸವಣ್ಣನವರ ಹಿಂದಣ ಕರ್ನಾಟಕ ಮತ್ತು ವೀರಶೈವ ಮತ-೩

ಕೃಪೆ:- ಶರಣ ಧರ್ಮ

**ವೀರಶೈವ ಧರ್ಮಕ್ಕೆ ಶಿವಾಗಮಗಳು ಪ್ರಮಾಣ ಗ್ರಂಥಗಳಾಗಿವೆ:-**

ವೀರಶೈವ ಮತವೇನೋ ಶ್ರೀ ಬಸವಣ್ಣನವರ ಪೂರ್ವದಲ್ಲಿಯೂ ಇದ್ದಿತು. ಆದರೆ ಅಂತ್ಯಜಾದಿಯಾಗಿ ಎಲ್ಲರಿಗೂ ಲಿಂಗಧಾರಣ ಮಾಡಿ ಮತ್ತು ಜನ್ಮಕ್ಕೆ ಪ್ರಾಧಾನ್ಯವಿಲ್ಲದೆ ಶೀಲಾಚಾರಗಳಿಗೇನೇ ಪ್ರಾಮುಖ್ಯತೆಯನ್ನು ಕೊಟ್ಟು ವರ್ಣಗಳನ್ನೇ ತೆಗೆದು ಹಾಕಿ ಸ್ತ್ರೀಯರಿಗೂ ಪುರುಷರಂತೆಯೇ ಧಾರ್ಮಿಕ ಸ್ವಾತಂತ್ರ್ಯವನ್ನುಂಟು ಮಾಡಿದ ಬಸವಣ್ಣನವರ ವೀರಶೈವ ಮತವೇ ಪೂರ್ವದಲ್ಲಿಯೂ ಇದ್ದಿತೇ ? ಎಂದು ಅನೇಕರು ಪ್ರಶ್ನೆ ಮಾಡುವುದುಂಟು. ಏಕೆಂದರೆ ಇವುಗಳೆಲ್ಲಾ ಅವೈದಿಕ ರೀತಿಗಳೆಂತಲೂ ಬಸವಣ್ಣನವರೇ ಇವುಗಳನ್ನು ವೀರಶೈವ ಮತದಲ್ಲಿ ಹೊಸದಾಗಿ ಸೇರಿಸಿದರೆಂತಲೂ ಅವರು ತಿಳಿಸಿದ್ದಾರೆ. ಇದು ಯುಕ್ತವಲ್ಲ.

ಕಾಮಿಕಾದಿ ವಾತುಲಾಂತ 28 ಶಿವಾಗಮಗಳು ವೀರಶೈವರಿಗೆ ಪ್ರಮಾಣ ಗ್ರಂಥಗಳೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಮತ್ತು ಈ ಶಿವಾಗಮಗಳು ಹನ್ನೆರಡನೆಯ ಶತಮಾನಕ್ಕಿಂತಲೂ ಪೂರ್ವದವುಗಳೆಂಬ ಅಂಶವನ್ನು ಎಂತಹ ವಿತಂಡವಾದಿಯು ಕೂಡ ಒಪ್ಪದಿರಲಾರನು. ಏಕೆಂದರೆ ಅನೇಕ ಶೈವಪುರಾಣಗಳಲ್ಲಿ ಈ ಆಗಮಗಳ ವಿಷಯವು ವಿವರವಾಗಿ ವಿವರಿಸಲ್ಪಟ್ಟಿದೆ. ಪುರಾಣಗಳ ಕಾಲಮಾನ ವಿಷಯದಲ್ಲಿ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಅವು 12 ನೆಯ ಶತಮಾನದಿಂದ ಇತ್ತಲಾಗಿ ಉಂಟಾದವುಗಳೆಂದು ಮಾತ್ರ ಈ ವರೆಗೆ ಯಾರೂ ಪ್ರತಿಪಾದಿಸಿಲ್ಲ. "ವೇದಾಗಮ ಪುರಾಣೇತಿಹಾಸ" ಎಂಬ ರೂಢಿಯಲ್ಲಿರುವ ಈ ಶಬ್ದ ಸಮುಚ್ಚಯವು ಕೂಡ ಆಗಮ ಕಾಲವು ಇತಿಹಾಸ ಪುರಾಣಗಳಿಗಿಂತಲೂ ಪ್ರಾಚೀನವಾದುದೆಂಬುದನ್ನೇ ವ್ಯಕ್ತ ಪಡಿಸುತ್ತದೆ. ಆದ ಕಾರಣ ಬಸವಣ್ಣನವರು ವೀರಶೈವ ಮತದಲ್ಲಿ ಯಾವ ಸುಧಾರಣೆಗಳನ್ನು ಅಥವಾ ಸಂಕರವನ್ನು ಮಾಡಿದರೆಂದು ಅನೇಕರು ತಿಳಿದಿದ್ದಾರೆಯೊ ಆ ವಿಷಯಗಳು ಆಗಮಗಳಲ್ಲಿ ಯಾವ ಪ್ರಕಾರ ಹೇಳಲ್ಪಟ್ಟಿವೆಯೆಂಬುದನ್ನು ನೋಡೋಣ.

ಪಾರಮೇಶ್ವರಾಗಮದಲ್ಲಿ ಹೇಳಿರುವುದೇನೆಂದರೆ :
ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾ ಶೂದ್ರಾಯೇ ಚಾನ್ಯ ಜಾತಯಃ ।
ಲಿಂಗಧಾರಣ ಮಾತ್ರೇಣ ಶಿವವಿವನ ಸಂಶಯಃ ॥



"ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಶೂದ್ರ ಅಥವಾ ಇನ್ನಾವ ಜಾತಿಯವರಾಗಿದ್ದರೂ ಅವರು ಲಿಂಗಧಾರಿಗಳಾದ ಮಾತ್ರದಲ್ಲಿಯೇ ಸಾಕ್ಷಾತ್‌ಶಿವ ಸ್ವರೂಪಿಗಳಾಗುತ್ತಾರೆ."

ಈ ಪ್ರಕಾರ ಲಿಂಗಾಂಗಿಗಳಾದವರಲ್ಲಿ ಅನಂತರ ಉಚ್ಚನೀಚತ್ವಗಳನ್ನು ಎಣಿಸಬಾರದೆಂಬ ವಿಷಯದಲ್ಲಿ.

ನ ಬಾಲವೃದ್ಧ ಭೇದೋಸ್ತಿ ನಮಸ್ಕಾರಾದಿ ಪೂಜನೇ ।
ಸರ್ವೇಪಿ ವಂದನೀಯಾಹಿ ವಿಧವಾಃ ಪುಷ್ಪಿಣೀ ಮುಖಾ ॥

ನಮಸ್ಕಾರ ಅಥವಾ ಪೂಜಾದಿಗಳನ್ನು ಮಾಡುವುದಾದರೆ ಆತನು ಬಾಲಕ ಅಥವಾ ವೃದ್ಧ ಅವಳು ವಿಧವೆ ಅಥವಾ ಮುತ್ತೈದೆ . ಎಂಬ ಭೇದಗಳನ್ನು ಮಾಡದೆ ಸಕಲರು ಪೂಜ್ಯರೆಂದೇ ತಿಳಿಯಬೇಕು.

ಈ ಪ್ರಕಾರ ಸಕಲ ವೀರಶೈವರೂ ಪೂಜ್ಯರಾಗುವ ಕಾರಣವನ್ನು ಕುರಿತು

ಯಸ್ಯಾಸ್ತಿ ಭಕ್ತಿರೀಶಾನಿ ವೀರಶೈವ ಮತಾಶ್ರಯೇ ।
ಭಕ್ತಿಮಾತ್ರ ಪವಿತ್ರಾಹಿ ಸರ್ವಏವಾಧಿಕಾರಿಣಃ ॥

"ಪಾರ್ವತೀ! ವೀರಶೈವ ಮತದ ವಿಷಯದಲ್ಲಿ ಯಾರಿಗೆ ಭಕ್ತಿಯಿದೆಯೋ ಅವರು ಆ ಭಕ್ತಿಯಿಂದಲೇ ಪವಿತ್ರರಾಗುತ್ತಾರೆ. ಈ ಭಕ್ತಿಮಾರ್ಗವನ್ನನುಸರಿಸಲು ಸಕಲರಿಗೂ ಸಮಾನವಾದ ಅಧಿಕಾರವಿದೆ."
ಇದೇ ವಿಷಯವಾಗಿ ಸೂಕ್ಷ್ಮಾಗಮದಲ್ಲಿ,

ಯಸ್ಯೈವಂ ಶಾಂಭವೀ ದೀಕ್ಷಾ ಜಾತಾಗುರು ಕೃಪಾವಶಾತ್
ಪೂರ್ವಜಾತ್ಯಾದಿಕಂ ತಸ್ಯನಸ್ಮರೇತ್ ಪಾಕೃತಂ ಹಿ ತತ್ ॥
'ಯಾರಿಗೆ . ಗುರುಕೃಪೆಯಿಂದ ಈ ಶಿವದೀಕ್ಷೆಯು ಪ್ರಾಪ್ತವಾಗುತ್ತದೆಯೋ

ಅವರ ಮುಂಚಿನ ಜಾತಿ ಮೊದವಾದುವುಗಳನ್ನು ಎಣಿಸಬಾರದು'

ಅಪ್ರಾಕೃಸತ್ಯ ಭಕ್ತಸ್ಯ ಗುರುಹಸ್ತಾಮಲಾಂಬು ಜಾತ್ ।
ಪುನರ್ಜಾತಸ್ಯಾತ್ಮ ಜನ್ಮ ಜಾತ್ಯಾದಿ ನಚ ಕಲ್ಪಯೇತ್ ॥

"ಪರಮ ಪವಿತ್ರವಾದ ಗುರುಕರ ಕಮಲದಿಂದ ಭಕ್ತನು ಜನ್ಮ ವೆತ್ತುವುದರಿಂದ ಆತನ ಸ್ವಜನ್ಮ ಮತ್ತು ಸ್ವಜಾತಿಗಳ ಕಲ್ಪನೆಯೇ ಉಳಿಯುವುದಿಲ್ಲ."

ಪಾಷಾಣಾಧಿಕೃತಂ ಲಿಂಗಂ ಯದ್ವತ್ಪೂಜ್ಯಂ ಪ್ರತಿಷ್ಠಿತಂ ।
ನೀಚವಂಶೋದ್ಭವಶ್ಚಾಪಿ ಭಕ್ತಶ್ಚೇ ದೀಶ್ವರೇ ತಥಾ ॥

"ಪಾಷಾಣಾದಿಗಳಿಂದ ಮಾಡಲ್ಪಟ್ಟ ಲಿಂಗವು ಪ್ರಾಣಪ್ರತಿಷ್ಠಿತವಾದೊಡನೆ ಹೇಗೆ ಪೂಜೆಗೆ ಯೋಗ್ಯವಾಗುತ್ತದೆಯೋ ಹಾಗೆಯೇ ನೀಚ ವಂಶದಲ್ಲಿ ಜನಿಸಿದವನು ಕೂಡ ಶಿವಭಕ್ತನಾಗುವುದರಿಂದ ಆತನೂ ಪೂಜ್ಯನಾಗುತ್ತಾನೆ."

ಭಕ್ತಸ್ಯ ಪ್ರಾಕ್ತನಂ ಜನ್ಮ ನಾಮಜಾತ್ಯಾದಿಕಂಚ ಯತ್ ।
ಪೃಚ್ಛೇದ್ವಾಕಥಯೇದ್ವಾಪಿ ಸರ್ವೈ ಪಾತಕಿನಾಂ ವರಃ ॥

"ಯಾರು ಭಕ್ತನ ಹಿಂದಣ ಜನ್ಮ, ಜಾತಿ, ಹೆಸರು ಮೊದಲಾವುಗಳನ್ನು ವಿಚಾರಿಸುತ್ತಾರೆಯೋ ಅಥವಾ ಹೇಳುತ್ತಾರೆಯೋ ಅವರು ಪಾಪಿಗಳಲ್ಲಿ ಪಾಪಿಗಳು."

ಈ ಆಗಮ ವಚನಗಳ ಮೇಲಿಂದ ಶ್ರೀ ಬಸವಣ್ಣನವರು ವೀರಶೈವ ಮತದಲ್ಲಿ ಈ ವಿಷಯಗಳ ಸುಧಾರಣೆಯನ್ನಾಗಲೀ ಅಥವಾ ಸಂಕರವನ್ನಾಗಲೀ ಮಾಡದೆ ಶುದ್ಧ ವೈದಿಕ ಪದ್ಧತಿಗಳನ್ನೇ ಊರ್ಜಿತಗೊಳಿಸಿದರೆಂಬುದು ಸ್ಪಷ್ಟವಾಗುವುದಿಲ್ಲವೇ ?

ಈವರೆಗಿನ ಸಂಕ್ಷಿಪ್ತ ವಿವರಣೆಯಿಂದಲೇ ಶ್ರೀ ಬಸವಣ್ಣನವರು ಅವತರಿಸುವುದಕ್ಕೆ ಮುಂಚೆ ಕರ್ನಾಟಕದಲ್ಲಿ ರಾಜಕೀಯ ಶಾಂತತೆಯಿದ್ದಿತೇ ವಿನಹ ಜನಾಂಗದ ಆತ್ಮೋನ್ನತಿಗೆ ಅನುಕೂಲವಾದ ಧಾರ್ಮಿಕ ಸ್ಥಿತಿಯಿರಲಿಲ್ಲವೆಂತಲೂ ಮತ್ತು ವೀರಶೈವ ಮತವು ಬಹುಮಟ್ಟಿಗೆ ಲೋಪವಾಗಿಯೇ ಹೋಗಿದ್ದಿತೆಂತಲೂ ವಾಚಕರಿಗೆ ವೇದ್ಯವಾಗದೆ ಇರಲಾರದು, ಇಷ್ಟೇ ಅಲ್ಲ, ಅಳಿದು ಹೋಗಿದ್ದ ಆ ಪ್ರಾಚೀನ ವೀರಶೈವ ಮತವನ್ನೇ ಶ್ರೀ ಬಸವಣ್ಣನವರು ಪುನಃ ಶಾಸ್ತ್ರ ಸಮ್ಮತವಾದ ರೀತಿಯಲ್ಲಿಯೇ ಪ್ರಚಾರ ಮಾಡಿದರೆಂಬ ಅಂಶವೂ ವ್ಯಕ್ತವಾಗಿರಬಹುದು.

**ಲೇ. ಹರ್ಡೇಕರ ಮಂಜಪ್ಪನವರು**

**–ಬಸವ ಚರಿತ್ರೆಯಿಂದ**





# ಗ್ರಾಮಾಂತರ ಬಸವ ಜಯಂತಿ

**ಹೆಚ್. ವಿ. ವೀರಭದ್ರಯ್ಯ,** ಉಪನ್ಯಾಸಕರು ಕನ್ನಡ ವಿಭಾಗ, ಸಿದ್ಧಗಂಗಾ ಕಾಲೇಜು ತುಮಕೂರು

**ಆತ್ಮೀಯ ಶರಣ ಬಂಧು,**

ದಿನಾಂಕ 24-5-87ರಂದು ರಾಜಾಜಿನಗರದಿಂದ ಹೊರಟ ಬಸವ ತತ್ವ ಪ್ರಚಾರ ಯಾತ್ರೆ 31-5-87ರಂದು ಬೆಂಗಳೂರಿನ ಮತ್ತೊಂದು ಬಡಾವಣೆ ದಾಸರಹಳ್ಳಿಯಲ್ಲಿ ಬಸವ ಜಯಂತಿಯನ್ನು ಆಚರಿಸುವಲ್ಲಿ ಯಶಸ್ವಿಯಾಯಿತು.

ಗ್ರಾಮಾಂತರ ಬಸವ ಜಯಂತಿ ನಗರದಲ್ಲೇಕೆ ಎಂದು ಪ್ರಶ್ನೆ ಮಾಡುತ್ತೀರಿ. ಅಲ್ಲವೇ ? ನಿಜ. ಕೇಳಬೇಕಾದ ಪ್ರಶ್ನೆಯೇ ಗ್ರಾಮೀಣ ಪ್ರದೇಶದ ಬಸವತತ್ವ ಪ್ರೇಮಿಗಳಿಗೆಂದೇ ರೂಪಿತವಾದ ಈ ಯೋಜನೆಯ ಮೂಲ ಉದ್ದೇಶ ಬಸವ ಸಂದೇಶ, ಜೀವನ ಸಾಧನೆ, ಮುಂತಾದುವುಗಳನ್ನು ತಿಳಿಯಲು ಅಪೇಕ್ಷಿಸುವ ಯಾರೇ ಆದರೂ ಅವರಿಗೆ ಕಿರುಪರಿಚಯವನ್ನಾದರೂ ಮಾಡಿಕೊಡುವ ಸಲುವಾಗಿ ನಗರಕ್ಕೂ ವ್ಯಾಪಿಸಿಕೊಳ್ಳಬೇಕಾಯಿತು. ಅಲ್ಲದೆ ನಗರದ ವಿವಿಧ ವೃತ್ತಿಯ ಬಂಧುಗಳಿಗೂ ತಮ್ಮ ದಿನದಿನದ ಬದುಕಿನ ನಡುವೆಯೂ ಬಸವ ತತ್ವಗಳನ್ನು ಹೇಗೆ ಅಳವಡಿಸಿಕೊಳ್ಳಬಹುದು ಎಂಬುದನ್ನು ಮನದಟ್ಟು ಮಾಡಿಕೊಡುವುದೂ ಸೂಕ್ತವೆನಿಸಿತು. ಲೋಕಪಾವನ ಮೂರ್ತಿಯಾದ ಬಸವಣ್ಣನವರ ಹಾಗೂ ಅವರ ಅನುಯಾಯಿಗಳ ಜೀವನವನ್ನು ಅನುಸರಿಸುವುದರಿಂದ ನಮಗೆ ಅದರಿಂದ ಪ್ರಯೋಜನವಿದೆಯೆಂಬುದನ್ನು ವಿಚಾರಶೀಲನಾದ ನೀನು ಒಪ್ಪುತ್ತೀಯಲ್ಲವೆ. ಮತ್ತು ಒಂದು ಕಾರಣ ಇಂದಿರಾನಗರವೆಂಬುದು ಒಂದು ಕಾಲಕ್ಕೆ ಹಳ್ಳಿಯೇ ಆಗಿತ್ತು. ದಾಸರಹಳ್ಳಿ ಬೆಂಗಳೂರಿಗೆ ಸೇರಿಹೋದ ಒಂದುಹಳ್ಳಿಯೇ ಆಗಿದೆ.

ಪ್ರಾತಃಕಾಲ ಹತ್ತು ಘಂಟೆಗೆ ಸರಿಯಾಗಿ ಸಮಾರಂಭ ವಿದ್ಯುಕ್ತವಾಗಿ ಪ್ರಾರಂಭವಾಯಿತು. ಭಕ್ತಾದಿಗಳ ಉತ್ಸಾಹ ಶ್ರದ್ಧೆಗಳು ಸಮಾರಂಭಕ್ಕೆ ವಿಶೇಷ ಶೋಭೆಯನ್ನು ತಂದು ಕೊಟ್ಟಿದ್ದರೆ ಕಾರ್ಯಕರ್ತರ ದಕ್ಷತೆ ವಿವೇಚನೆಗಳು ಯೋಜಿತ ರೀತಿಯಲ್ಲಿ ಸಮಾರಂಭ ನಡೆಯಲು ಅನುವು ಮಾಡಿಕೊಟ್ಟಿದ್ದವು. ಸಮಾವೇಶಗೊಂಡಿದ್ದ ಬೃಹತ್ ಜನಸ್ತೋಮವನ್ನು ಕಂಡಾಗ ಪರಮ ಪೂಜ್ಯರೇಕೆ ಗ್ರಾಮೀಣ ಮುಗ್ಧ ಬಂಧುಗಳತ್ತ ವಿಶೇಷ ಒಲವು ತೋರಿಸುತ್ತಾರೆ. ಎಂಬುದು ಹೊಳೆಯಿತು. ಗ್ರಾಮೀಣ ಮುಗ್ಧರುಗಳಲ್ಲಿರುವ ನಿಷ್ಠೆಯಿಂದಾಗಿ ಪೂಜ್ಯ ಶ್ರೀ ಶ್ರೀಗಳವರು ಅವರತ್ತ ಕರುಕಂಡ ಹಸು ಧಾವಿಸುವಂತೆ ನಡೆಯುತ್ತಾರೆ. ಕೇವಲ ಕ್ಷಣಿಕವಾದ ಅನುಕೂಲತೆಗಳಿಗೆ ನಿಷ್ಠೆಯನ್ನು ತೊಳೆಯಬೇಕಾದ ಆಕರ್ಷಣೆಗಳಿಗೆ ಬಲಿಯಾಗುವವರು ಅವರಲ್ಲ ಎಂಬುದನ್ನು ಪದೇ ಪದೇ ಹೇಳುತ್ತಲೇ ಇರುತ್ತಾರೆ. ಸುಸಂಸ್ಕೃತಿಯ ಲಕ್ಷಣವಾದ ನಿಷ್ಠೆಯನ್ನು ಬೆಳೆಸಿಕೊಳ್ಳುವುದರಿಂದ ದೇಶಕ್ಕೂ ಸಮಾಜಕ್ಕೂ ಕಲ್ಯಾಣವುಂಟೆಂಬುದನು ಗ್ರಾಮೀಣ ಮುಗ್ಧ ಬಂಧುಗಳಿಂದ ಕಲಿಯಬೇಕಾಗಿದೆ. ಇಂದು ಮುಖಂಡರು ಕಲಿತವರೆಂದು ಬೀಗುವ ಯುವಜನಾಂಗ ಎಂಬುದನ್ನು ಮನಗಾಣುವಂತಾಯಿತು.

ಬಂಡೆಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ಸಮಾರಂಭವನ್ನು ಉದ್ಘಾಟಿಸುತ್ತ ಬಸವಣ್ಣನವರು ಮಹಾನುಭಾವರು ಶರಣ ಶ್ರೇಷ್ಠರು, ಅವರು ತೋರಿಸಿದ ಹಾದಿಯಲ್ಲಿ ನಡೆಯುವುದೇ ನಾವು ಅವರಿಗೆ ಅರ್ಪಿಸಬಹುದಾದ ಕಾಣಿಕೆ ಎಂದರು.

ಬಸವಣ್ಣನವರು ಹುಟ್ಟು ಹೋರಾಟಗಾರರು ಹಿಂದೂ ಧರ್ಮದ ಸುಧಾರಕರು, ಮನಕುಲದ ಮಂಗಳ ದೀಪ ಅವರು ಎಂದು ಉಪನ್ಯಾಸ ಮಾಡುತ್ತ ಕನ್ನಡ ಸಾಹಿತ್ಯ ಅವರು ರಚಿಸಿದ ವಚನಗಳಿಂದ ಶ್ರೀಮಂತವಾಯಿತು. ಅದರ ಅಧ್ಯಯನ ಮಾಡುವುದರಿಂದ ಬಸವಣ್ಣನವರ ನಿಜವಾದ ಪರಿಚಯ ನಮಗಾಗುತ್ತದೆ ಎಂದರು ಶ್ರೀ ಸಿದ್ಧಗಂಗಾ ಕಾಲೇಜಿನ ರಾಜ್ಯಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಶ್ರೀ ಬಿ ವೀರಭದ್ರಯ್ಯನವರು.

ಬಸವಣ್ಣ ಮಾಡಿದ ಸುಧಾರಣೆಯನ್ನು ಗಮನಿಸಿದರೆ ಅದರಲ್ಲೂ ಗ್ರಾಮೀಣಬಂಧುಗಳನ್ನು ಗಮನಿಸಿದರೆ ಎಷ್ಟೊಂದು ಅರ್ಥಪೂರ್ವವಾದ ಸುಧಾರಣೆಯೆಂಬುದನ್ನು ಹಳ್ಳಿಯ ಹೆಣ್ಣುಮಕ್ಕಳ ಸವಿ ಸೊಲ್ಲುಗಳಿಂದ ಎತ್ತಿ ತೋರಿಸಿದರು. ಶ್ರೀ H.V. ವೀರಭದ್ರಯ್ಯನವರು

ಬಸವಣ್ಣನವರು ಮಾಡಿದ ಸುಧಾರಣೆ ಅದ್ಭುತವಾದುದು. ಇಂದು ಕಾರ್ಲ್ ಮಾರ್ಕ್ಸ್‌ನ ತತ್ವಗಳಿಗೆ ಜಗತ್ತು ಮಾರು ಹೋಗುತ್ತಿರುವುದನ್ನು ನೋಡಿದರೆ, ಅದರ ಬೀಜಗಳು ಬಸವಣ್ಣನವರಲ್ಲಿದೆಯೆಂಬುದನ್ನು ಸ್ಮರಿಸಬೇಕಾಗುತ್ತದೆ. ಭಗವಾನ್ ಬಸವಣ್ಣನವರು ದನಕಾಯುವ, ಕ್ಷೌರ ಮಾಡುವ, ದೋಣಿ ನಡೆಸುವ, ಬಟ್ಟೆ ಒಗೆಯುವ, ಮೆಟ್ಟು ಹೊಲಿಯುವ, ಕಸ ಗುಡಿಸುವ, ಹಗ್ಗ ಹೊಸೆಯುವಂಥವರು ಸಾಹಿತ್ಯ ರಚಿಸುವಷ್ಟು ಸುಧಾರಣೆ ಮಾಡಿದ್ದನ್ನು ಗಮನಿಸಿದರೆ ಅವರು ಮಾಡಿದ ಕ್ರಾಂತಿಯ ಸ್ವರೂಪ ಎಂಥದೆಂದು ಗೊತ್ತಾಗುತ್ತದೆ. ಮನುಷ್ಯ ಮನುಷ್ಯನಾಗಿ ಬಾಳುವ ಕಲೆಯನ್ನು ಕಲಿಸಿಕೊಟ್ಟಲ್ಲದೆ ಜೀವನ ಸುಂದರವಾದ ಕಲೆಯೆಂಬುದನ್ನು ಸಾಬೀತು ಮಾಡಿ ತೋರಿಸಿದರು. ದುಡಿಮೆಗಿಂತ ದೊಡ್ಡದು ಯಾವುದೂ ಇಲ್ಲ. ದುಡಿಮೆಯಲ್ಲಿ ಆತ್ಮವಿಶ್ವಾಸ, ಆತ್ಮಾಭಿಮಾನಗಳು ವ್ಯಕ್ತವಾದರೆ ದುಡಿದುದನ್ನು ನೀಡುವಲ್ಲಿ ಅರ್ಪಣೆ, ಅಹಂಕಾರ ನಿರಸನಗಳು ಅರಳುವುದನ್ನು ಕಾಣಬಹುದು. ವ್ಯಕ್ತಿಯ ಚಾರಿತ್ರ್ಯ ಸಮಾಜ, ರಾಷ್ಟ್ರದ ಚಾರಿತ್ರ್ಯ ನಿರ್ಮಾಣಕ್ಕೆ ಮೂಲಭೂತವಾದದ್ದು. ಬಸವಾದಿ ಶರಣರು ವ್ಯಕ್ತಿಯ ಚಾರಿತ್ರ್ಯಕ್ಕೆ ವಿಶೇಷ ಗಮನ ನೀಡುತ್ತ ಪರಮಪೂಜ್ಯ ಶ್ರೀ ಶ್ರೀಗಳವರು ನಾವು ಆ ಮಾರ್ಗದಲ್ಲಿ ನಡೆಯುವುದೊಂದೇ ಅವರಿಗೆ ತೋರಿಸಬಹುದಾದ ಗೌರವ, ಎಂಬುದಾಗಿ ಅಪ್ಪಣೆ ಕೊಡಿಸಿದರು.

ರಾತ್ರಿ ಹತ್ತು ಘಂಟೆಗೆ ಸರಿಯಾಗಿ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ ಜಗಜ್ಯೋತಿ ಬಸವೇಶ್ವರ ನಾಟಕ (200ನೆಯ ಪ್ರದರ್ಶನ) ಅಭಿನಯಿಸಲಾಯಿತು ಅಂತಃರಾಷ್ಟ್ರೀಯ ನಾಟಕಗಳನ್ನು ನೋಡಿದ ಬೆಂಗಳೂರಿನ ಬಂಧುಗಳು ನಾಟಕ ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ನಾಟಕದ ವೇಗಗತಿಯನ್ನು ಗಮನಿಸಿದ ಪೀಣ್ಯದ ವೃತ್ತಿ ಕಲಾವಿದನೊಬ್ಬ "ಇಷ್ಟೊಂದು Quick ಆಗಿ ಯಾವ ಕಂಪನಿಯಲ್ಲೂ ದೃಶ್ಯ ಬದಲಾವಣೆಯಾಗುವುದನ್ನು ನಾನು ಕಂಡಿಲ್ಲ ಸ್ವಾಮಿ, ನಿಜಕ್ಕೂ ಸಿದ್ಧಗಂಗೆ ಸ್ವಾಮಿಗಳ ಸೇವೆಯನ್ನು ಎಷ್ಟು ಕೊಂಡಾಡಿದರೂ ಸಾಲದು." ಎಂದು ದಾಸರಹಳ್ಳಿಯ ಪೆಟ್ಟಿಗೆ ಅಂಗಡಿಯೊಂದರ ಮುಂದೆ ಹೇಳುತ್ತಿದ್ದುದನ್ನು ವರದಿಗಾರ ಗಮನಿಸಿದಾಗ ಸಾರ್ಥಕ ಯೋಜನೆ ಇದು ಎನಿಸಿತು.



(2ನೇ ರಕ್ಷಾಪುಟದಿಂದ)

**ಕುಡಿಯುವ ನೀರು** :– ಕಳೆದ ಐದು ವರ್ಷಗಳಲ್ಲಿ 50 ಸಾವಿರ ಕೊಳವೆ ಬಾವಿಗಳನ್ನು ಕೊರೆದಿರುವ ಕರ್ನಾಟಕ ದಾಖಲೆಯ ನಿರ್ಮಿಸಿದೆ.

**ಪಂಪುಸೆಟ್ಟುಗಳಿಗೆ ವಿದ್ಯುತ್ ಪೂರೈಕೆ** :– ಪಂಪು ಸೆಟ್ಟುಗಳಿಗೆ ವಿದ್ಯುತ್ ಪೂರೈಸುವ ವಿಚಾರದಲ್ಲಿ ಗುರಿ ಮೀರಿದ ಸಾಧನೆಯಾಗಿದೆ.

**ಖುಷ್ಕಿಭೂಮಿ ಅಭಿವೃದ್ಧಿ** ಖುಷ್ಕಿಭೂಮಿ ಅಭಿವೃದ್ಧಿಗಾಗಿ ವೈಜ್ಞಾನಿಕ ಯೋಜನೆಗೆ ಕೈಗೊಂಡಿರುವ ಕರ್ನಾಟಕ ಇರುವ ಸಂಪನ್ಮೂಲಗಳನ್ನು ಸಮರ್ಥವಾಗಿ ಬಳಸಿ ಕೃಷಿ ಕ್ಷೇತ್ರದಲ್ಲಿ ಅಧಿಕ ಉತ್ಪಾದನೆಗೆ ಅವಕಾಶ ಕಲ್ಪಿಸಿದೆ, ಇಪ್ಪತ್ತು ಅಂಶಗಳ ಕಾರ್ಯಕ್ರಮದ ಅನುಷ್ಠಾನದಲ್ಲಿ ಕರ್ನಾಟಕ ಒಳ್ಳೆಯ ಸಾಧನೆ ತೋರಿದೆ.

**ಜನತೆಯ ಕೈಗೇ ಅಧಿಕಾರ** :– ಗಾಂಧೀಜಿಯ "ಗ್ರಾಮರಾಜ್ಯ" ದ ಕಲ್ಪನೆಯನ್ನು ಕೃತಿಗಿಳಿಸಿ ಪಂಚಾಯತಿರಾಜ್ಯ ವ್ಯವಸ್ಥೆಯನ್ನು ಜಾರಿಗೆ ತಂದಿರುವ ಕರ್ನಾಟಕ ಅಧಿಕಾರ ವಿಕೇಂದ್ರೀಕರಣದ ಹಾದಿಯಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟಿರುವ ರಾಜ್ಯ. ಈಗ ರಾಜ್ಯದಲ್ಲಿ ಜನತೆಯ ಕೈಗೇ ಅಧಿಕಾರ. ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವವರೂ ಅವರೇ. ಅನುಷ್ಠಾನಗೊಳಿಸುವ ಹೊಣೆಯೂ ಅವರದೇ.

**ಚುನಾವಣಾ ಸುಧಾರಣೆ** ಹಲವಾರು ಚುನಾವಣಾ ಸುಧಾರಣೆಗಳನ್ನು ಜಾರಿಗೆ ತಂದಿರುವ ಕರ್ನಾಟಕ ಪ್ರಜಾಪ್ರಭುತ್ವ ತತ್ವವನ್ನು ಅನ್ವರ್ಥಗೊಳಿಸಿದೆ.

**ಸ್ವಚ್ಛ ಆಡಳಿತ** ಅಧಿಕಾರದ ದುರುಪಯೋಗ ಮತ್ತು ಭ್ರಷ್ಟಾಚಾರವನ್ನು ತಡೆಗಟ್ಟಿ ಆಡಳಿತ ಕ್ಷೇತ್ರದಲ್ಲಿ ಸ್ವಚ್ಛತೆ ಮತ್ತು ದಕ್ಷತೆಯನ್ನು ಮೂಡಿಸುವ ಸಲುವಾಗಿ ಕರ್ನಾಟಕ ಸರ್ಕಾರ ಕೈಗೊಂಡಿರುವ ಒಂದು ಆದರ್ಶ ನಿರ್ಧಾರ ಲೋಕಾಯುಕ್ತದ ರಚನೆ.

ಬಡತನ, ಅನಕ್ಷರತೆ, ಅಜ್ಞಾನ ಮತ್ತು ಶೋಷಣೆಗಳ ನಿರ್ಮೂಲನಕ್ಕೆ ನಿರಂತರ ಪ್ರಯತ್ನ ನಡೆಸುತ್ತಿರುವ ಕರ್ನಾಟಕ ಸರ್ಕಾರ ಜನತೆಯ ವಿಶ್ವಾಸದೊಂದಿಗೇ ಸಾಮಾಜಿಕ ಸಮಾನತೆಯನ್ನು ಸಾಧಿಸುವ ದೃಢವಿಶ್ವಾಸನ್ನು ಹೊಂದಿದೆ.

—ಕರ್ನಾಟಕ ವಾರ್ತೆ